

# " ಬಹಮನಿ ಕಾಳಗಗಳು "

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ
ಎಂ.ಫಿಲ್. ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)


ಸಂಶೋಧಕರು

ಕವಿರತ್ನ ಬಾಬುರಾವ

ಎಂ.ಎ., ಬಿ.ಎಡ್.

ಮಾರ್ಗದರ್ಶಕರು

ಡಾ. ಕೆ. ನಾಗವನಜ

ಎಂ.ಎ, ಪಿಎಚ್.ಡಿ, ಡಿಪಿ.ಇನ್.ಎಪಿ.

ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ.




ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಶೋಧನಾ ನಿಬಂಧ


ಚರಿತ್ರೆ ಅಧ್ಯಯನ ವಿಭಾಗ,

ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ-೫೮೩೨೭೬

೨೦೦೮





# "ಬಹಮನಿ ಕಾಳಗಗಳು"

(ಕ.ರಾ.ಶಿ.ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)



ಸಂಶೋಧಕರು

**ಕವಿರತ್ನ ಬಾಬುರಾವ**

ಎಂ.ಎ., ಬಿ.ಎಡ್.

ಮಾರ್ಗದರ್ಶಕರು

**ಡಾ. ಕೆ. ನಾಗವನಜ**

ಎಂ.ಎ, ಪಿಎಚ್.ಡಿ, ಡಿಪಿ.ಇನ್.ಎಪಿ.

ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ.



ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಶೋಧನಾ ನಿಬಂಧ
ಚರಿತ್ರೆ ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ-೫೮೩ ೨೭೬
೨೦೦೯

# ಘೋಷಣಾ ಪತ್ರ

**''ಬಹಮನಿ ಕಾಳಗಗಳು''** ಎಂಬ ನಿಬಂಧವನ್ನು ನಾನು ಡಾ. ಕೆ. ನಾಗವನಜ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಇದನ್ನು ಇಡಿಯಾಗಿ ಇಲ್ಲವೇ ಬಿಡಿಯಾಗಿ, ಎಲ್ಲಿಯೂ ಪ್ರಕಟಿಸಿಲ್ಲವೆಂದು ಪ್ರಮಾಣಿಕರಿಸುತ್ತಾ, ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಈ ನಿಬಂಧವನ್ನು ಸಾದರ ಪಡಿಸುತ್ತಿದ್ದೇನೆ.

Barma

**ಕವಿರತ್ನ ಬಾಬುರಾವ**
ಸಂಶೋಧನಾ ವಿದ್ಯಾರ್ಥಿ
ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ.

ಸ್ಥಳ : ಬೀದರ

ದಿನಾಂಕ : 30-09-2009

# ಮಾರ್ಗದರ್ಶಕರ ಪ್ರಮಾಣ ಪತ್ರ

ಶ್ರೀ ಕವಿರತ್ನ ಬಾಬುರಾವ ಇವರು ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ಅಧ್ಯಯನ ವಿಭಾಗದಲ್ಲಿ ಸಂಶೋಧನೆ ಕೈಗೊಂಡು "**ಬಹಮನಿ ಕಾಳಗಗಳು**" ಎಂಬ ನಿಬಂಧವನ್ನು ಎಂ. ಫಿಲ್. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇದು ಇವರ ಮೂಲ ನಿಬಂಧವಾಗಿದ್ದು, ಈ ಮೊದಲು ಇದು ಇಡಿಯಾಗಿ ಇಲ್ಲವೇ ಬಿಡಿಯಾಗಿ, ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣಿಕರಿಸಲಾಗಿದೆ.

**ಡಾ. ಕೆ. ನಾಗವನಜ**
ಎಂ.ಎ, ಪಿಎಚ್.ಡಿ, ಡಿಪ್. ಎನ್.ಎಪಿ.
**ಮಾರ್ಗದರ್ಶಕರು**
ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ.

ಸ್ಥಳ : ಬೀದರ

ದಿನಾಂಕ : 30-09-2009

# ವಿಷಯ ಸೂಚಿ


| ಅಧ್ಯಾಯ ಸಂಖ್ಯೆ ವಿಷಯ | ಪುಟ ಸಂಖ್ಯೆ |
|---|---|
| ಅಧ್ಯಾಯ ಒಂದು | |
| ಪ್ರವೇಶ, ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ | ೧-೧೧ |
| ಅಧ್ಯಾಯ ಎರಡು | |
| ಬಹಮನಿ ಸಾಮ್ರಾಜ್ಯದ ಹಿನ್ನಲೆ | ೧೨-೨೨ |
| ಅಧ್ಯಾಯ ಮೂರು | |
| ಬಹಮನಿ ಸಾಮ್ರಾಜ್ಯದ ಸಂಕ್ಷಿಪ್ತ ಇತಿಹಾಸ ಮತ್ತು ವಂಶಾವಳಿ | ೨೩-೩೮ |
| ಅಧ್ಯಾಯ ನಾಲ್ಕು | |
| ಬಹಮನಿ ಕಾಳಗಗಳಿಗೆ ಪ್ರೇರಕವಾದ ಅಂಶಗಳು | ೩೯-೪೫ |
| ಅಧ್ಯಾಯ ಐದು | |
| ಬಹಮನಿ ಸಾಮ್ರಾಜ್ಯದ ಪ್ರಮುಖ ಕಾಳಗಗಳು | ೪೬-೭೮ |
| ಅಧ್ಯಾಯ ಆರು | |
| ಸಮಾರೋಪ | ೭೯-೮೪ |
| ಗ್ರಂಥಋಣ | ೮೫-೮೭ |
| ನಕ್ಷೆಗಳು | |

# ಅಧ್ಯಾಯ-೧

## ಪ್ರವೇಶ, ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಮಧ್ಯಯುಗಿನ ದಕ್ಷಿಣ ಭಾರತದ ಭವ್ಯ ಇತಿಹಾಸದ ಸಂಪುಟಗಳಲ್ಲಿ ಸುಮಾರು ಇನ್ನೂರು ವರ್ಷಗಳ ಕಾಲ ಹೆಮ್ಮೆಯಿಂದ ಮೆರೆದ ಬಹಮನಿ ರಾಜ್ಯವು ತನ್ನದೇ ಆದ ವೈಶಿಷ್ಟ್ಯತೆಯನ್ನು ಪಡೆದಿದೆ.

ಸುಮಾರು ಹನ್ನೆರಡನೆಯ ಶತಮಾನದ ಅಂತ್ಯದ ವೇಳೆಗೆ ಉತ್ತರ ಭಾರತದಲ್ಲಿ ದೆಹಲಿ ಸುಲ್ತಾನರ ಸಾಮ್ರಾಜ್ಯ ಸ್ಥಾಪನೆಯಾದರು ಕೂಡ ಸುಮಾರು ನೂರು ವರ್ಷಗಳವರೆಗೂ ಈ ಸಾಮ್ರಾಜ್ಯ ಕೇವಲ ಉತ್ತರ ಭಾರತದ ವ್ಯಾಪ್ತಿಗೆ ಮಾತ್ರ ಒಳಪಟ್ಟಿತ್ತು. ನಂತರ ಅಲ್ಲಾವುದ್ದೀನ ಖಿಲ್ಜಿಯ ದಂಡನಾಯಕನಾದ ಮಲ್ಲಿಕ್‌ಕಾಫೂರನು ದಕ್ಷಿಣದ ಮೇಲೆ ದಂಡಯಾತ್ರೆ ಕೈಗೊಂಡನು. ಈತನ ದಂಡಯಾತ್ರೆಯ ಪರಿಣಾಮವಾಗಿ ದಕ್ಷಿಣದಲ್ಲಿ ಅಸ್ಥಿತ್ವದಲ್ಲಿದ ನಾಲ್ಕು ಮನೆತನಗಳಾದ ದೇವಗಿರಿಯ ಯಾದವರು, ವಾರಂಗಲ್‌ನ ಕಾಕತೀಯರು, ದ್ವಾರಸಮುದ್ರದ ಹೋಯ್ಸಳರು, ಹಾಗೂ ಮಧುರೈ ಪಾಂಡ್ಯರು ಅವನತಿ ಕಂಡರು. ಮಲ್ಲಿಕ್ ಕಾಫೂರನ ದಾಳಿ ಸಂಪತ್ತನ್ನು ಕೊಳ್ಳೆ ಹೊಡೆಯುವ ಉದ್ದೇಶ ಹೊಂದಿತ್ತು. ಆದರು ಇವನ ದಾಳಿಗಳಿಂದ ದಕ್ಷಿಣ ಭಾರತದಲ್ಲಿ ಇಸ್ಲಾಂ ಪ್ರಭಾವ ಬೀರಿತು. ಜೊತೆಗೆ ಅನೇಕ ಸಣ್ಣ ಪುಟ್ಟ ರಾಜಮನೆತನಗಳು ಅಸ್ಥಿತ್ವಕ್ಕೆ ಬಂದವು. ದೆಹಲಿ ಸುಲ್ತಾನನಾದ ಮಹಮ್ಮದ ಬಿನ್ ತುಘಲಕನ ಕಾಲದಲ್ಲಿ ಅನೇಕ ರೀತಿಯ ಬದಲಾವಣೆಗಳಾದವು. ಅವನ ದಕ್ಷಿಣದ ಮೇಲಿನ ದಾಳಿಗಳು ಅನೇಕ ದಂಗೆಗಳಿಗೆ ಕಾರಣವಾದವು. ದೇವಗಿರಿಯ ಯಾದವರ ಮನೆತನ ನಾಶಗೊಳಿಸಿ ತನ್ನ ರಾಜಧಾನಿಯನ್ನು ದೆಹಲಿಯಿಂದ ದೇವಗಿರಿಗೆ ವರ್ಗಾಯಿಸಿದ. ಅದಕ್ಕೆ ದೌಲತಾಬಾದ್ ಎಂದು ಹೆಸರಿಟ್ಟ, ನಂತರ ತನ್ನ ರಾಜಧಾನಿಯನ್ನು ಮತ್ತೆ ದೆಹಲಿಗೆ ವರ್ಗಾಯಿಸಿದಾಗ, ದಕ್ಷಿಣದಲ್ಲಿಯ ಅನೇಕ ರಾಜ್ಯಗಳಲ್ಲಿ ತನ್ನ ಪ್ರತಿನಿಧಿಗಳನ್ನು ನೇಮಕಮಾಡಿದ. ಇದರಿಂದ ಸಾಮ್ರಾಜ್ಯದಲ್ಲಿ ಅನೇಕ

ನಾಯಕರು ಸ್ವತಂತ್ರ ಘೋಷಿಸಿಕೊಂಡರು. ಇದರ ಫಲವಾಗಿ ದಕ್ಷಿಣ ಭಾರತದಲ್ಲಿ ವಿಜಯನಗರ ಹಾಗೂ ಬಹಮನಿಗಳೆಂಬ ವಿಭಿನ್ನ ಸಂಸ್ಕೃತಿಯ ಎರಡು ಮನೆತನಗಳು ಸ್ಥಾಪನೆಯಾದವು.

ಬಹಮನಿ ಸಾಮ್ರಾಜ್ಯದ ಸ್ಥಾಪನೆಯ ಮೊದಲು ಕ್ರಿ.ಶ ೧೩೩೬ ರಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗಿತ್ತು. ವಿಜಯನಗರ ಸಾಮ್ರಾಜ್ಯಕ್ಕೆ ವಿರುದ್ಧವಾಗಿ ಕ್ರಿ.ಶ ೧೩೪೭ ರಲ್ಲಿ ಬಹಮನಿ ಮನೆತನ ಸ್ಥಾಪನೆಗೊಂಡಿತು. ಇದು ಸ್ಥಾಪನೆಯಾದ ನಂತರ ಸುಮಾರು ಇನ್ನೂರು ವರ್ಷಗಳ ಕಾಲ ಆಳ್ವಿಕೆಯಲ್ಲಿ ೧೮ ಜನ ಸುಲ್ತಾನರು ರಾಜಕೀಯ ಪ್ರಭುಗಳಾಗಿ ಮೇರೆದರು. ಇವರ ಆಳ್ವಿಕೆಯ ಪ್ರಭಾವದಿಂದ ದಕ್ಷಿಣದ ಕಡೆಗೆ ಇಸ್ಲಾಂ ಧರ್ಮ ಮತ್ತು ರಾಜ್ಯ ವಿಸ್ತಾರಗೊಂಡಿತ್ತು. ಬಹಮನಿ ಮನೆತನ ಸ್ಥಾಪನೆಯಾದ ಮೇಲೆ ಬಹಮನಿ ಸುಲ್ತಾನರು ಸದಾ ಯುದ್ಧದಲ್ಲಿ ತೊಡಗಿರುವುದು ಕಂಡು ಬಂದಿದೆ.

ಬಹಮನಿ ಚರಿತ್ರೆಯೆಂದರೆ ಅದು ಕಾಳಗಗಳ ಚರಿತ್ರೆ ಎಂಬಷ್ಟರ ಮಟ್ಟಿಗೆ ಆ ಎರಡು ಮನೆತನಗಳ ನಡುವೆ ಘರ್ಷಣೆಗಳಾದವು. ಬಹಮನಿಯ ಇತಿಹಾಸ ಅದು ವಿಜಯನಗರದೊಂದಿಗೆ ನಡೆದ ಯುದ್ಧಗಳ ಚರಿತ್ರೆಯಾಗಿದೆ. ಬಹಮನಿಯ ಇಸ್ಲಾಂ ಪ್ರಭುತ್ವವು ಸದಾ ವಿಜಯನಗರದೊಂದಿಗೆ ಸೆಣಸಾಟದಲ್ಲಿ ತೊಡಗಿಗೊಂಡಿತು. ಬಹಮನಿಯ ಚರಿತ್ರೆಯೆಂದರೆ ಬಹಮನಿ ಹಾಗೂ ವಿಜಯನಗರದ ನಡುವಿನ ಹೋರಾಟ, ಕಚ್ಚಾಟ, ತಿಕ್ಕಾಟ, ಬಡಿದಾಟಗಳ ಚರಿತ್ರೆ ಎಂದು ಹೇಳಬಹುದು.

ಈ ರೀತಿ ಎರಡು ರಾಜ್ಯಗಳಲ್ಲಿದ್ದ ವಿಭಿನ್ನ ಧರ್ಮ, ಸಂಸ್ಕೃತಿ, ಭಾಷೆ, ಜನಾಂಗ, ಸಂಪ್ರದಾಯ ಮತ್ತು ಸಾಮಾಜಿಕ ವ್ಯವಸ್ಥೆ ಅವೆರಡು ಸಾಮ್ರಾಜ್ಯದ ಅರಸರಲ್ಲಿ ವೈರಿ ಭಾವನೆಗಳನ್ನು ಸೃಷ್ಟಿಸಿದವು. ಅಲ್ಲದೆ ಉತ್ತರ ಭಾರತದಿಂದ ದಕ್ಷಿಣಕ್ಕೆ ಬಂದ ಮಹಮದೀಯರು ಜಿಹಾದಿ ಸಿದ್ಧಾಂತದಲ್ಲಿ ನಂಬಿಕೆಯನ್ನು ಹೊಂದಿದ್ದು ಬಹಮನಿ ಸಾಮ್ರಜ್ಯವನ್ನು ಸ್ಥಾಪಿಸಿದ ನಂತರ ಇಲ್ಲಿದ್ದ ಅನ್ಯ ರಾಜ್ಯಗಳೊಡನೆ ಯುದ್ಧಕಿಳಿದರು. ಅಲ್ಲದೆ ಹೊಸದಾಗಿ ಅಸ್ತಿತ್ವಕ್ಕೆ ಬಂದ ಬಹಮನಿ ಸಾಮ್ರಾಜ್ಯಕ್ಕೆ ಹೆಚ್ಚಿನ ಭೂ ಪ್ರದೇಶಬೇಕಾಗಿತ್ತು. ದಕ್ಷಿಣದಲ್ಲಿನ ಚಿಕ್ಕಪುಟ್ಟ ರಾಜ ಮನೆತನಗಳ ನಡುವಿನ ನಿರಂತರ ಕಚ್ಚಾಟ, ದ್ವೇಷ, ವೈಷಮ್ಯಗಳು ಅವರನ್ನು ಯುದ್ಧಾಕಾಂಕ್ಷಿಗಳನ್ನಾಗಿ ತಯಾರಿಸಿದವು. ಪ್ರತಿಯೊಂದು ಜೀವಿಯು ಸೃಷ್ಟಿಯ ನಿಯಮದಂತೆ ತನ್ನ ಹೆಗ್ಗುರುತುಗಳನ್ನು ಬಿಟ್ಟು ಹೋಗುವ ವಿಚಾರ ಮಾಡುವ ಹಾಗೆ ಬಹಮನಿ ಅರಸರು ಕೂಡಾ ಅಂದಿನ ಪರಿಸ್ಥಿತಿ ಸಂದರ್ಭಕ್ಕೆ ತಕ್ಕಂತೆ ವಿಶಾಲ ಭೂಪ್ರದೇಶದಲ್ಲಿ ಸಾಮ್ರಾಜ್ಯ ಸ್ಥಾಪಿಸಿ ವಿಶ್ವ ಇತಿಹಾಸದಲ್ಲಿ ಚಿರಸ್ಥಾಯಿಯಾಗಿ ಉಳಿಯಬೇಕೆಂಬ ಬಯಕೆಯಿಂದಾಗಿ ವಿಜಯನಗರ ಮತ್ತು ಇತರ ರಾಜ್ಯಗಳೊಂದಿಗೆ ಅವರು ಯುದ್ಧ ಮಾಡುವಂತೆ ಮಾಡಿದವು.

ಬಹಮನಿಯ ಕೆಲ ಸುಲ್ತಾನರು ಅನೇಕ ಯುದ್ಧಗಳನ್ನು ಕೇವಲ ಸಂಪತ್ತಿನ ಲೂಟಿಗಾಗಿ ನಡೆಸಿದರು. ಅವರ ಮುಖ್ಯ ಗುರಿ ಸಾಮ್ರಾಜ್ಯ ವಿಸ್ತರಿಸುವುದಾಗಿರಲಿಲ್ಲ. ಅಂದರೆ ಯುದ್ಧಗಳಲ್ಲಿ ಗೆಲುವನ್ನು ಪಡೆದ ನಂತರ ಶರಣಾಗತ ಅರಸರಿಂದ ಅಪಾರ ಪ್ರಮಾಣದಲ್ಲಿ ಕಪ್ಪು ಕಾಣಿಕೆ ಸಂಗ್ರಹಿಸಿ ಆ ಹಣದಿಂದ ತಮ್ಮ ಸಾಮ್ರಾಜ್ಯದ ತುಂಬೆಲ್ಲಾ ಅದ್ಭುತವೂ, ಅದೃಶವೂ ಆದ ಅನೇಕ ವಿಶ್ವವಿಖ್ಯಾತ ಕಟ್ಟಡಗಳನ್ನು ಕಟ್ಟುವುದರ ಮೂಲಕ ಕಲೆ ಮತ್ತು ವಾಸ್ತು ಶಿಲ್ಪ ರಂಗದಲ್ಲಿ ಅಜರಾಮರವಾಗಬೇಕೆಂಬ ಬಯಕೆಗಳು ಅವರನ್ನು ಇನ್ನಿತರ ಅರಸರೊಂದಿಗೆ ಯುದ್ಧ ಮಾಡಲು ಪ್ರೇರೇಪಿಸಿತು. ಸಾಮ್ರಾಜ್ಯದ

ಶ್ರೀಮಂತಿಕೆಗಾಗಿ, ಜನರ ಶಾಂತ ಭರಿತ ಜೀವನಕ್ಕಾಗಿ ಅಂದಿನ ಕಾಲದಲ್ಲಿ ಅಸ್ತಿತ್ವದಲ್ಲಿದ ದೋಅಬ್, ಗೋವಾ, ತೆಲಂಗಾಣ, ಮುದಗಲ್ ಪ್ರದೇಶಗಳು ಆಯಾ ರಾಜ್ಯದಲ್ಲಿರುವುದು ಅತೀ ಅವಶ್ಯಕವೆನಿಸಿತ್ತು. ಏಕೆಂದರೆ ಈ ಪ್ರದೇಶಗಳಲ್ಲಿನ ಭೂಮಿ ಅತಿ ಫಲವತ್ತತೆಯಿಂದ ಕೂಡಿದ್ದು ಕೃಷಿಕರಿಗೆ ಸ್ವರ್ಗವಾಗಿತ್ತು. ಅದ್ದರಿಂದ ಆರ್ಥಿಕವಾಗಿ ರಾಜ್ಯವನ್ನು ಸಧೃಡಗೊಳಿಸುವುದು ಇವುಗಳಿಂದ ಸುಲಭದ ಕೆಲಸವಾಗಿತ್ತು. ಅದರಲ್ಲೂ ಗೋವಾ ಬಂದರಿನ ಮೂಲಕ ಆಂತರಿಕ ಮತ್ತು ವಿದೇಶಿ ವ್ಯಾಪರದಿಂದ ಆರ್ಥಿಕ ಲಾಭ ಸಿಗುತ್ತಿದ್ದು ಅದರ ವಶಕ್ಕಾಗಿ ಅನೇಕ ಸರಣಿ ಯುದ್ಧಗಳೇ ನಡೆದಿವೆ. ಹೆಚ್ಚಾಗಿ ಬಹಮನಿ ಮತ್ತು ವಿಜಯನಗರ ಅರಸರ ನಡುವೆ ಕೃಷ್ಣಾ ಮತ್ತು ತುಂಗಾಭದ್ರಾ ನದಿಗಳ ನಡುವಿನ ದೋಆಬ್ ಪ್ರದೇಶವು ಅವರಲ್ಲಿ ವೈಷಮ್ಯ ಬೆಳೆಸಲು ಕಾರಣವಾಗಿತ್ತು. ಅದೆ ತೆರನಾಗಿ ಬಹಮನಿ ಮತ್ತು ವಾರಂಗಲ್ ಮನೆತನಗಳ ನಡುವೆ ಗೋದಾವರಿ ಮತ್ತು ಕೃಷ್ಣಾ ನದಿಗಳ ನಡುವಣ ದೋಆಬ್ ಪ್ರದೇಶ ಅನೇಕ ಯುದ್ಧಗಳನ್ನು ಸೃಷ್ಟಿಸಿತ್ತು.

ಬಹಮನಿ ಸಾಮ್ರಾಜ್ಯವು ನಿರಂತರವಾಗಿ ಸಿಂಹಾಸನಕ್ಕೋಸ್ಕರ ವಾದಗ್ರಸ್ಥವಾಗಿದ್ದು ಅಲ್ಲದೇ ಆಂತರಿಕ ದಂಗೆಗಳಿಂದಾಗಿ ಹಾಗೂ ಆಫಾಕೀಯನ್ನರ ಪ್ರಭಾವದಿಂದಾಗಿ ಆಡಳಿತ ಕ್ಷೇತ್ರ ಸಂಪೂರ್ಣವಾಗಿ ಹದಗೆಟ್ಟಿತ್ತು. ಇದರ ಸದುಪಯೋಗಕ್ಕಾಗಿ ಇಂತಹ ಸ್ಥಿತಿಯನ್ನೇ ಕಾಯುತ್ತಿದ್ದ ಅನ್ಯ ರಾಜ್ಯದವರು ಬಹಮನಿಯರ ಮೇಲೆ ದಾಳಿಗಳನ್ನು ಮಾಡುತ್ತಿದ್ದರು. ಕಾರಣದಿಂದ ಈ ದಾಳಿಗಳಿಗೆ ಉತ್ತರವಾಗಿ ತನ್ನ ಸಾರ್ವಭೌಮತ್ವ ಮತ್ತು ರಕ್ಷಣೆಗೋಸ್ಕರ ವೈರಿಗಳ ಜೊತೆ ಕಾದಾಡಲೇಬೇಕಾಗಿತ್ತು. ಬಹಮನಿಯರು ಹೊಂದಿದ್ದ ಸಮರ್ಥವಾದ ಸೈನ್ಯ, ಸೈನ್ಯದಲ್ಲಿನ ದಕ್ಷತೆ ಹಾಗೂ ಅವರು ಹೊಂದಿದ ಫಿರಂಗಿ ಪಡೆ, ಅಶ್ವದಳ, ಕಾಲ್ದಳಗಳು ವ್ಯವಸ್ಥಿತವಾಗಿದ್ದು. ವಿದೇಶಿಯ ಟರ್ಕ ಮತ್ತು ಆಫಘಾನ್ನರ ಸೇನಾ ರೀತಿಯಲ್ಲಿ ಅವರಿಗೆ ತರಬೇತಿ ನೀಡಲಾಗಿತ್ತು. ಅಲ್ಲದೆ ವಿಜಯನಗರದವರು ಸಾಂಪ್ರದಾಯಿಕ ತೋಪುಗಳನ್ನು ಹೊಂದಿದ್ದು, ಆ ಮಟ್ಟದಲ್ಲಿಯೇ ಯುದ್ಧ ತಂತ್ರ ಹೆಣೆಯುತಿತ್ತು. ಇದರಿಂದಾಗಿ ಬಹಮನಿ ಅರಸರು ಯುದ್ದ ಉತ್ಸಾಹಿಗಳಾಗುವಂತೆ ಮಾಡಿ ಅವರೀರ್ವರ ನಡುವೆ ಅನೇಕ ಕದನಗಳಿಗೆ ಎಡೆ ಮಾಡಿಕೊಟ್ಟಿತು.

ಬಹಮನಿ ಅರಸರು ಕರ್ನಾಟಕ ಚರಿತ್ರೆಯಲ್ಲಿ ಹೆಮ್ಮೆಯಿಂದ ಮೇರೆದು ಒಂದು ವಿಶಿಷ್ಟ ಸಂಸ್ಕೃತಿಯನ್ನು ಕಾಣಿಕೆಯಾಗಿ ನೀಡಿದರು. ಬಹಮನಿ ಸುಲ್ತಾನರು ಕೇವಲ ಯುದ್ಧಕೋರರಲ್ಲದೆ ದಕ್ಷ ಆಡಳಿತಗಾರರು ಕೆಲವು ಸುಲ್ತಾನರು ಅನ್ಯ ಧರ್ಮ ಸಹಿಷ್ಣುಕರು, ಸಂಗೀತ, ಸಾಹಿತ್ಯ, ಶಿಕ್ಷಣ, ಕಲೆ ಮತ್ತು ವಾಸ್ತು ಶಿಲ್ಪವನ್ನು ಪೋಷಿಸಿದರು. ಇವರ ಆಸ್ಥಾನದಲ್ಲಿ ಮಹಾನ ಸಾಹಿತ್ಯಗಳು, ಕಲಾಕಾರರು, ಶಿಲ್ಪಿಗಳು ಆಶ್ರಯ ಪಡೆದಿದ್ದರು. ಇವರ ಆಳ್ವಿಕೆಯಲ್ಲಿ ಅನೇಕ ಸೂಫಿಸಂತರು ದಕ್ಷಿಣಕ್ಕೆ ಬಂದು ನೆಲಸಿ ಇಲ್ಲಿ ಧಾರ್ಮಿಕ ಸಂಹಿಷ್ಣುತೆಯನ್ನು ಬೆಳೆಸಿದರು. ದಕ್ಷಿಣದ ಸಂಸ್ಕೃತಿಯೊಂದಿಗೆ ತಮ್ಮನ್ನು ತಾವು ಬೆರೆತು ಮುಂದಿನ ಜೀವನ ಕಳೆದರು. ಇಲ್ಲಿ ಬಹುಮಂದಿ ಷಿಯಾ ಪಂಗಡದವರಾಗಿದ್ದರು. ಹಿಂದೂ ಮತ್ತು ಮುಸ್ಲಿಂ ಎರಡು ಧರ್ಮಗಳ ನಡುವಿನ ಅಂತರವನ್ನು ಬಹುತೇಕವಾಗಿ ಕಡಿಮೆ ಮಾಡಲು ಅಂದಿನ ಸೂಫಿಸಂತರುಗಳು ಸಹ ಬಹುವಾಗಿ ಶ್ರಮಿಸಿದರು. ಇವರು ಪರ್ಷಿಯನ್ ಶೈಲಿ

ದಖ್ಖನ್ನಿ ಶಿಲ್ಪ ಶೈಲಿಯನ್ನು ತನ್ನದಾಗಿಸಿಕೊಂಡು ತನ್ನದೆಯಾದ 'ಇಂಡೋ ಸಾರ್ಸನಿಕ್' ಶೈಲಿಯನ್ನು ಹುಟ್ಟು ಹಾಕಿದರು.

ಮಹಮ್ಮದ ಗವಾನನ ಕಾಲದಲ್ಲಿ 'ಬೀದರಿ' ಎಂಬ ಮಿಶ್ರ ಲೋಹದ ಕಲೆ ಬೆಳಕಿಗೆ ಬಂದಿತು. ತಾಮ್ರ ಪತುಗಳ ಮಿಶ್ರ ಕಪ್ಪು ಲೋಹದಿಂದ ತಯಾರಿಸಲಾದ ಹೂಜಿ, ಹರಿವಾಣ, ಭರಣಿ ಮೊದಲಾದ ಕಲಾಕೃತಿಗಳು ಹೋಬಳ್ಳಿಗಳಿಂದಲೂ, ಕುರಾನಿನ ದಿವ್ಯ ವಾಕ್ಯಗಳಿಂದಲೂ, ಬೆಳ್ಳಿರೇಖೆಗಳಲ್ಲಿ ಅಲಂಕೃತವಾಗಿ ನಿರ್ಮಿಸಲ್ಪಡುತಿದ್ದವು. ಈ ಎಲ್ಲಾ ಕಾರಣಗಳಿಂದಾಗಿ ಬಹಮನಿ ಸುಲ್ತಾನರ ಕಾಲಕ್ಕೂ ಇಸ್ಲಾಂ ಧರ್ಮ, ಸಂಸ್ಕೃತಿ, ಶಿಕ್ಷಣ ಪ್ರವರ್ಧಮಾನಕ್ಕೆ ಬಂದು ದೌಲತಾಬಾದ್, ಗುಲಬರ್ಗಾ, ಬೀದರ, ಮುಂತಾದ ಸಾಮಾನ್ಯ ಪಟ್ಟಣಗಳು ಭವ್ಯ ನಗರಗಳಾಗಿ ವಿಶ್ವ ಪ್ರಸಿದ್ಧಿ ಪಡೆದವು ಮದ್ಯಪ್ರಾಚ್ಯದ ಹಲವಾರು ಪಟ್ಟಣಗಳಿಂದ ಕಲಾವರೇಣ್ಯರು ಬಹಮನಿ ರಾಜ್ಯಕ್ಕೆ ಬಂದು ಅಧ್ಬುತವೂ, ಅಸದೃಶವೂ ಆದ ಕಟ್ಟಡಗಳನ್ನು ನಿರ್ಮಿಸಿದರು.

ಬಹಮನಿ ರಾಜ್ಯದ ಬಗ್ಗೆ ಅವರ ಕಾಲದ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಹಾಗು ಕಲೆ ಮತ್ತು ವಾಸ್ತು ಶಿಲ್ಪದ ಬಗ್ಗೆ ಅನೇಕ ರೀತಿಯ ವ್ಯವಸ್ಥಿತವಾದಂತಹ ಅಧ್ಯಾಯನ ನಡೆದರು ಸಹ ಬಹಮನಿಯರು ಕೈಗೊಂಡ ಕಾಳಗಗಳ ಬಗ್ಗೆ ವ್ಯವಸ್ಥಿತವಾಗಿ ಅಧ್ಯಯನ ಈವರೆಗೂ ನಡೆದಿಲ್ಲ. ಆದ ಕಾರಣ ಈ ಸಂಶೋಧನೆಯ ಮೂಲಕ ಬಹಮನಿಯ ಕಾಳಗಗಳನ್ನು ಪ್ರತ್ಯೇಕವಾಗಿ ವ್ಯವಸ್ಥಿತವಾಗಿ ಕಾಲನು ಕ್ರಮವಾಗಿ ಅಧ್ಯಾಯನ ಮಾಡುವುದರ ಮುಖಾಂತರ ಬಹಮನಿರ ಕಾಳಗಗಳನ್ನು ವಿವರಿಸುವ ಸಣ್ಣ ಪ್ರಯತ್ನವನ್ನು ಮಾಡಲಾಗಿದೆ.

ದಕ್ಷಿಣದಲ್ಲಿದ್ದ ಎರಡು ಮನೆತನಗಳ ಸಂಸ್ಕೃತಿ, ಭಾಷೆ, ಜನಾಂಗ, ಧರ್ಮ, ಸಂಪ್ರದಾಯಗಳೆಲ್ಲವು ವಿಭಿನ್ನವಾಗಿದ್ದು ಅವೆರಡೂ ಎಂದಿಗೂ ಸೇರಲಾರದಂತಹ ವಿಭಿನ್ನತೆಗೆ ಒಳಪಟ್ಟಿದ್ದವು. ಕೆಲ ಇತಿಹಾಸಕಾರರು ಬಹಮನಿ ಅರಸರನ್ನು ಜಿಹಾದಿಗಳೆಂದು ಕರೆದು ಅವರನ್ನೇ ತಪ್ಪಿತಸ್ಥ ಸ್ಥಾನದಲ್ಲಿರಿಸಿದ್ದಾರೆ. ಆದರೆ ಈ ಅಧ್ಯಾಯನದ ಕಾಲಕ್ಕೆ ಅಂದಿನ ಪರಿಸ್ಥಿತಿಗನುಗುಣವಾಗಿ ಪ್ರತಿ ರಾಜ ಮನೆತನವು ಸಾಮ್ರಾಜ್ಯ ವಿಸ್ತರಿಸುವಲ್ಲಿ ತನ್ನ ರಕ್ಷಣೆಗಾಗಿ ಅನ್ಯರ ಜೊತೆ ಯುದ್ಧಕ್ಕಿಳಿಯುವ ಸನ್ನಿವೇಶಗಳು ಸರ್ವೆ ಸಾಮಾನ್ಯವಾಗಿ ಸೃಷ್ಟಿಯಾಗುತ್ತಿದ್ದವು. ಅಂತೆಯೇ ಬಹಮನಿಯರು ಕೂಡಾ ಆ ಉದ್ದೇಶಗಳಿಗಾಗಿ ಯುದ್ಧ ಮಾಡಿದರೆ ಹೊರತು ಉತ್ತರ ಭಾರತದಲ್ಲಿದ್ದ ಮುಸ್ಲಿಂ ಪ್ರಭುಗಳಂತೆ ಜಿಹಾದಿ ಭಾವನೆಗಳನ್ನು ಹೊಂದಿರಲಿಲ್ಲ. ಅಲ್ಲದೆ ದಕ್ಷಿಣ ಭಾಗದಲ್ಲಿ ಬೆಳೆದ ಸೂಫಿ ಚಳುವಳಿಗಳು ಬಹಮನಿ ಅರಸರು ಪರಧರ್ಮ ಸಹಿಷ್ಣುಗಳಾಗಿದ್ದರು ಎಂಬುದನ್ನು ಪುಷ್ಟಿಕರಿಸುತ್ತದೆ. ಹಾಗೆಂದ ಮಾತ್ರಕ್ಕೆ ವಿಜಯನಗರದ ಅರಸರು ತಪ್ಪು ಮಾಡಿದರೆಂಬ ಭಾವನೆ ನಮ್ಮದಲ್ಲ ಏಕೆಂದರೆ ಹಲವು ಸಂದರ್ಭಗಳಲ್ಲಿ ವಿಜಯನಗರದ ಅರಸರು ಬಹಮನಿ ರಾಜ್ಯದ ರಕ್ಷಣೆಗೆ ಪ್ರತ್ಯಕ್ಷ ಮತ್ತು ಪರೋಕ್ಷ ಬೆಂಬಲ ನೀಡಿರುವುದು ಕಂಡು ಬಂದಿದೆ. ಉದಾಹರಣೆಗೆ ಕೃಷ್ಣ ದೇವರಾಯನು ಬೀದರ ಮೇಲೆ ದಾಳಿ ಮಾಡಿ ಅಲ್ಲಿ ಸೆರೆಮನೆಯಲ್ಲಿದ್ದ ಸುಲ್ತಾನನ ಮಕ್ಕಳನ್ನು ಬಿಡುಗಡೆಗೊಳಿಸಿ, ಅವರಲ್ಲಿ ಹಿರಿಯನನ್ನು ಬಹಮನಿ ಸುಲ್ತಾನನ್ನಾಗಿ ನೇಮಿಸಿ ಇನ್ನೀರರ್ವರನ್ನು ರಕ್ಷಣೆಗೋಸ್ಕರ ತನ್ನೊಂದಿಗೆ ವಿಜಯನಗರ ಸಾಮ್ರಾಜ್ಯಕ್ಕೆ ಕರೆದುಕೊಂಡು ಹೋದನು.

ಈ ಅಂಶವನ್ನು ಗಮನಿಸಿದಾಗ ಎರಡು ಭಿನ್ನ ಸಂಸ್ಕೃತಿಗಳ ಜನರ ಮನಸ್ಸುಗಳು ಬೇರೆಯಾಗಿದ್ದವೆ ಹೊರತು ಅವರ ಭಾವನಾತ್ಮಕ ಸಂಭಂದವಲ್ಲ.

## ಅಧ್ಯಯನದ ಉದ್ದೇಶ :

ಬಹಮನಿ ಸಾಮ್ರಾಜ್ಯದ ಇತಿಹಾಸಕ್ಕೆ ಸಂಬಂಧಿಸಿದಂತೆ ಇಲ್ಲಿಯವರೆಗೆ ಅನೇಕ ಕೃತಿಗಳು ಹೊರ ಬಂದಿವೆ. ಅವರುಗಳ ಸಮಗ್ರವಾದ ಇತಿಹಾಸವನ್ನು ಬಿಡಿ ಬಿಡಿಯಾಗಿ ಅದರಲ್ಲಿ ಕಾಣಬಹುದು. ಆದರೆ ಬಹಮನಿ ಅರಸರು ಕೈಗೊಂಡ ಐತಿಹಾಸಿಕ ಮತ್ತು ಅನೇಕ ನಿರ್ಣಾಯಕ ಕದನಗಳ ಬಗ್ಗೆಯಾಗಲಿ ಅಥವಾ ಅದಕ್ಕೆ ಕರಣವಾದ ಅಂಶಗಳ ಬಗ್ಗೆಯಾಗಲಿ ಈವರೆಗೂ ಪ್ರತ್ಯೇಕವಾದ, ವ್ಯವಸ್ಥಿತವಾದ ಅಧ್ಯಯನ ನಡೆದಿರುವುದಿಲ್ಲ ಕಾರಣ ಆ ಕೊರತೆಯನ್ನು ತುಂಬುವ ಅಳಿಲು ಪ್ರಯತ್ನ ಇಲ್ಲಿ ಮಾಡಲಾಗಿದೆ.

ನಾನು ಎಂ.ಫಿಲ್ ಪದವಿ ಪರೀಕ್ಷೆಯಲ್ಲಿ ಪಾಸಾದ ನಂತರ ಹಲವು ದಿನಗಳ ಕಾಲ ವಿಷಯಕ್ಕೆ ತಡಕಾಡಿದೆ ಜೊತೆಯಲ್ಲಿದ್ದವರೆಲ್ಲಾ ವಿಷಯ ಆಯ್ಕೆ ಮಾಡಿಕೊಂಡು ಸಂಶೋಧನೆಗೆ ತೊಡಗಿದರೂ ಕೂಡಾ ಕೆಲ ದಿನಗಳವರೆಗೆ ವಿಷಯ ಆಯ್ಕೆಯಲ್ಲಿ ಗೊಂದಲದಲ್ಲಿದ್ದ ನಾನು ಕೊನೆಗೆ ಈ ಭಾಗದಲ್ಲಿಯೇ ಜನ್ನ ತಾಳಿ ಸುಮಾರು ೧೮೦ ವರ್ಷಗಳ ಕಾಲ ವಿಜೃಂಭಣೆಯಿಂದ ಮೆರೆದ ರಾಜ್ಯದ ಕಾಳಗಗಳ ವ್ಯವಸ್ಥಿತ ಮತ್ತು ಕಾಲಾನುಕ್ರಮಣಿಕೆಯ ಅಧ್ಯಯನವಾರದೇ ಇರುವುದನ್ನು ಮನಗಂಡು ಈ ವಿಷಯವನ್ನು ಕೈಗೆತ್ತಿಕೊಂಡೆನು. ಬಹಮನಿ ಅರಸರ ಹಿನ್ನಲೆ, ವಂಶಾವಳಿ, ಚರಿತ್ರೆ, ಹಾಗೂ ವಿಶೇಷವಾಗಿ ಅವರುಗಳ ಕಾಳಗೆಗಳನ್ನು ಕುರಿತು ಒಂದು ಸುಸಜ್ಜಿತವಾದ, ವ್ಯವಸ್ಥಿತವಾದ ಪ್ರತ್ಯೇಕ ಕಿರು ಪ್ರಭಂದವನ್ನು ರಚಿಸುವ ಉದ್ದೇಶ ನನ್ನದಾಗಿತ್ತು. ಅಲ್ಲದೇ ಯುದ್ಧಗಳ ವಿವರಣೆಯ ಜೊತೆಗೆ ಅವರ ಕಾಲದಲ್ಲಾದ ಅನೇಕ ಕ್ಷೇತ್ರಗಳ ಗಣನೀಯ ಪ್ರಮಾಣದ ಅಭಿವೃದ್ದಿಯ ಕುರಿತು ಇಲ್ಲಿ ಅಲ್ಪ ಪ್ರಮಾಣದ ವಿವರಣೆ ನೀಡಲಾಗಿದೆ. ಬಹಮನಿ ಅರಸರು ವಿಜಯನಗರ ಮತ್ತು ಅನ್ಯ ಮನೆತನದವರೊಂದಿಗೆ ಆಂತರಿಕವಾಗಿ ಮತ್ತು ಬಾಹ್ಯವಾಗಿ ಹೊಂದಿದ ಸಂಬಂಧದ ಬಗ್ಗೆ ಕೆಲ ಅಂಶಗಳನ್ನು ಕಲೆ ಹಾಕುವ ಉದ್ದೇಶ ನನ್ನದಾಗಿತ್ತು.

ಭೌಗೋಳಿಕ ಅಂಶಗಳ ಮಧ್ಯೆ ನಡೆದ ಹಲವಾರು ಕದನಗಳು ಚಾರಿತ್ರಿಕವಾದ ಮಹತ್ವವನ್ನು ಪಡೆದುಕೊಂಡಿವೆ. ಅವುಗಳೆಲ್ಲವೂ ಉತ್ತರ ಭಾರತದಲ್ಲಾದ ನಿರ್ಣಾಯಕ ಕದನಗಳಂತೆ ರಾಜಕೀಯ ಪ್ರಭಾವ ಬೀರದಿದ್ದರೂ. ಸಹ ಈ ಭಾಗದಲ್ಲಿ ಮುಂದೊಂದು ದಿನ ಅನತಿ ಕಾಲದಲ್ಲಿಯೇ ಐತಿಹಾಸಿಕವೂ, ಮತ್ತು ವಿಶಿಷ್ಟವೂ ಎನಿಸಿಕೊಂಡ ಸೂಫಿ ಚಳುವಳಿ ನಡಿಯಲು ಕಾರಣವಾಯಿತು. ಈ ಕಿರು ಸಂಶೋಧನೆಯ ಮೂಲಕ ಕಾಳಗಗಳ ಜೊತೆ ತುಣುಕು ಹಾಕಿಕೊಂಡ ಇಂತಹ ಅನೇಕ ಮಹತ್ವದ ಐತಿಹಾಸಿಕ ವಿಷಯಗಳನ್ನು ಸಮಾಜದ ಮುಂದಿಡುವ ಘನ ಉದ್ದೇಶ ಈ ಕಿರು ಪ್ರಭಂದದ್ದಾಗಿದೆ.

ಇಲ್ಲಿಯವರೆಗೆ ಬಹಮನಿ ಅರಸರು ಕೈಗೊಂಡ ಸರಣಿ ಕಾಳಗಗಳ ಕುರಿತು ಪ್ರತ್ಯೇಕ ಅಧ್ಯಯನ ನಡೆದಿರಲಿಲ್ಲ. ಕಾರಣ ಅಂತಹ ಹೊಸ ಪ್ರಯತ್ನಕ್ಕೆ ಮುನ್ನುಡಿ ಬರೆದು ಅವರು ಮಾಡಿದ ಅನೇಕ ಚಾರಿತ್ರಿಕ ಕದನಗಳು, ಅದಕ್ಕೆ ಕಾರಣವಾದ ಅಂಶಗಳು, ಕದನಗಳಿಂದಾದ ಪರಿಣಾಮಗಳು, ಎರಡು

ಸಾಮ್ರಾಜ್ಯಗಳಲ್ಲಿನ ಜನರಲ್ಲಿನ ಭಾವನೆಗಳನ್ನು ಈ ಕೃತಿಗಲ್ಲಿ ವಿವರಿಸಿರುವುದರಿಂದ ಇದು ತನ್ನದೇಯಾದ ಮಹತ್ವವನ್ನು ಪಡೆದುಕೊಂಡಿದೆ. ಭವಿಷ್ಯತ್ತಿನಲ್ಲಿ ಸಂಶೋಧನಾ ವಿದ್ಯಾರ್ಥಿಗಳಿಗೆ ಹಾಗು ಇತಿಹಾಸ ಅಧ್ಯಯನ ಆಸಕ್ತರಿಗೆ ಇದರಿಂದಾಗಿ ಅಣು ಪ್ರಮಾಣದಲ್ಲಾದರೂ ಸರಿ ಸಹಾಯವಾದರೆ ಈ ಕಿರು ಪ್ರಬಂಧದ ರಚನೆಯ ನನ್ನ ಶ್ರಮಕ್ಕೆ ಬೆಲೆ ಮತ್ತು ಮಹತ್ವ ದೊರಕಿದಂತಾಗುತ್ತದೆ.

## ಅಧ್ಯಯನದ ವ್ಯಾಪ್ತಿ :

ಕ್ರಿ.ಶ ೧೩ನೇ ಶತಮಾನದಲ್ಲಿ ದಕ್ಷಿಣ ಭಾರತದ ಮೇಲೆ ಮುಸ್ಲಿಂರ ದಾಳಿಯಿಂದಾಗಿ ೧೪ನೇ ಶತಮಾನದ ಅಂತ್ಯದ ವೇಳೆಗೆ ದಕ್ಷಿಣದಲ್ಲಿ ಅನೇಕ ಮುಸ್ಲಿಂ ರಾಜಮನೆತನಗಳು ಸ್ಥಾಪನೆಯಾದವು ಪ್ರಾರಂಭದಲ್ಲಿ ಚಿಕ್ಕ ರಾಜ್ಯಗಳಾದರು ಸಹ ನಂತರ ಇವು ಸ್ಥಳಿಯ ದಖ್ಖನ ಅರಸರ ಆಂತರಿಕ ಕಚ್ಚಾಟದ ಲಾಭವನ್ನು ಪಡೆದು ವಿಶಾಲವಾದ ರಾಜ್ಯ ವಿಸ್ತರಿಸಿದರು. ಅವುಗಳಲ್ಲಿ ಬಹಮನಿ ರಾಜ್ಯವು ಒಂದಾಗಿದೆ. ದಖ್ಖನ ಪ್ರಸ್ಥಭೂಮಿಯ ವಿಶಾಲ ಬಯಲಿನಲ್ಲಿ ಸ್ಥಾಪನೆಯಾದ ಈ ರಾಜಮನೆತನದಿಂದಾಗಿ ಗುಲಬರ್ಗಾ, ಬೀದರ, ದೌಲತಾಬಾದ, ಬಿಜಾಪುರ, ಗೋಲ್ಕೊಂಡಾ, ಅಹಮದನಗರ ಮುಂತಾದ ಸಾಮಾನ್ಯ ಪಟ್ಟಣಗಳು ಸಹ ಭವ್ಯ ನಗರಗಳಾಗಿ ಬೆಳೆದವು. ದಖ್ಖನ ನಾಡಿನಲ್ಲಿ ವಿಜಯನಗರ ಹೊರತು ಪಡೆಸಿದರೆ ಬಹಮನಿ ವಿಶಾಲವಾದ ಭೂ ಪ್ರದೇಶ ಹೊಂದಿತು.

ಈ ಅಧ್ಯಯನದಲ್ಲಿ ದಖ್ಖನಿನಲ್ಲಿ ವಿಶಾಲವಾದ ಸಾಮ್ರಾಜ್ಯದ ಸ್ಥಾಪನೆಗಾಗಿ ಕೈಗೊಂಡ ಅವರ ಕಾಳಗಗಳನ್ನು ವಿವರಿಸಲಾಗಿದೆ. ಈ ಅಧ್ಯಯನದ ವ್ಯಾಪ್ತಿಯು ಬಹಮನಿ ಅರಸರು ಅವರು ಹೊಂದಿದ ಯುದ್ಧ ಕೌಶಲ್ಯ, ಸೈನಿಕ ಬಲ ಹಾಗು ಸಾಮ್ರಾಜ್ಯ ವಿಸ್ತಾರ ನೀತಿಯನ್ನು ಒಳಗೊಂಡಿದೆ. ಈ ಅಧ್ಯಯನದ ವ್ಯಾಪ್ತಿಯು ಬಹಮನಿ ಸಾಮ್ರಾಜ್ಯದ ಸ್ಥಾಪನೆ (೧೩೪೭)ಯಿಂದ ಹಿಡಿದು ಸಾಮ್ರಾಜ್ಯವು ೧೪೮೯ ರ ಸುಮಾರಿಗೆ ಒಡೆದು ಐದು ರಾಜಮನೆತನಗಳಾಗುವರೆಗಿನ ಮಾಹಿತಿ ಒಳಗೊಂಡಿದೆ ಆದರು ಸಹ ಬೀದರನಲ್ಲಿ ೧೫೨೮ರವರೆಗೆ ಬಹಮನಿಯು ಒಂದು ಸಣ್ಣ ರಾಜ್ಯವಾಗಿ ಉಳಿದಿತ್ತು. ನಂತರ ಅಲ್ಲಿ ಬರಿದ ಶಾಹಿ ಮನೆತನ ಪ್ರಾರಂಭವಾಯಿತು. ಅಧ್ಯಯನದ ಸಲುವಾಗಿ ಕೇವಲ ಇದರಲ್ಲಿ ೧೩೪೭ ರಿಂದ ೧೫೨೮ ರವರೆಗಿನ ಇತಿಹಾಸ ಮಾತ್ರ ಒಳಗೊಂಡಿದೆ. ಅಲ್ಲಾವುದ್ದೀನ್ ಹಸನ್ ಬಹಮನ್‌ಷಾ ನಿಂದ ಕೊನೆಯದಾಗಿ ನಾಲ್ಕನೆ ಮಹಮದಷಾನ ಕಾಲದ ಕಾಳಗದವರೆಗೆ ವಿವರಿಸಲಾಗಿದೆ. ಬಹಮನಿ ರಾಜ್ಯವು ೧೩೫೮ ರವರೆಗೆ ಕೇಲವೆ ಪ್ರದೇಶಗಳಿಗೆ ಮಾತ್ರ ಸೀಮಿತವಾಗಿತ್ತು ನಂತರ ಬಂದ ಸುಲ್ತಾನರು ಮಹಮದಷಾಹ, ಫೀರೋಜಷಾಹ, ಅಹಮದಷಾಹ, ಪ್ರಧಾನಿ ಮಹಮದ ಗವಾನರು ಕೈಗೊಂಡ ಸೈನಿಕ ದಾಳಿಗಳಿಂದ ೧೪೮೧ ಸುಮಾರಿಗೆ ಸಾಮ್ರಾಜ್ಯವು ಪಶ್ಚಿಮಕ್ಕೆ ಅರಬ್ಬಿ ಸಮುದ್ರದ ಕೊಂಕಣ ಪ್ರದೇಶದಿಂದ ಗುಜುರಾತವರೆಗೆ ವಿಸ್ತರಿಸಿತ್ತು. ಉತ್ತರ ಮಾಳವಾ ಪ್ರಸ್ಥಭೂಮಿ, ಎಲಿಚಪುರ,ದೌಲತಾಬಾದ ದಿಂದ ದಕ್ಷಿಣದ ರಾಯಚೂರು ದೋಅಬ್ ಪ್ರದೇಶ ಹಾಗೂ ಪೂರ್ವದ ವಾರಂಗಲ್,ರಾಜಮುಂಡ್ರಿ, ಬಂಗಾಳ ಕೊಲ್ಲಿಯವರೆಗೆ ವಿಸ್ತರಿಸಿತ್ತು.

ಬಹಮನಿ ಸಮ್ರಾಜ್ಯದ ವಿರುದ್ಧ ದಕ್ಷಿಣದಲ್ಲಿ ವಿಸ್ತಾರವಾಗಿದ್ದ ವಿಜಯನಗರದೊಂದಿಗೆ ಅನೇಕ ಕಾಳಗಗಳು ನಡೆದವು. ಈ ಎರಡು ಸಾಮ್ರಾಜ್ಯಗಳು ಭಿಭಿನ್ನ ಸಂಸ್ಕೃತಿಯನ್ನು ಹೊಂದಿದ್ದು ಇವು ಸದಾ ತಮ್ಮ ಪ್ರಾಭಲ್ಯ ಪ್ರತಿಷ್ಠೆಯ ಸಲುವಾಗಿ ಹೋರಾಡುತಿದ್ದವು. ಅದಲ್ಲದೆ ಉತ್ತರದ ದೆಹಲಿ ಸುಲ್ತಾನರ ಹತೋಟಿಯಲ್ಲಿದ್ದ ಅನೇಕ ಸಣ್ಣ ಪುಟ್ಟ ಸುಲ್ತಾನರನ್ನು ಇವರು ನಿಯಂತ್ರಣದಲ್ಲಿಟ್ಟುಕೊಂಡು ಕಪ್ಪನ್ನು ವಸುಲಿ ಮಾಡುತಿದ್ದರು. ಪ್ರಾರಂಭದಲ್ಲಿ ದಕ್ಷಿಣಕ್ಕಿರುವ ಗುಲಬರ್ಗಾವನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ನಂತರ ಅವರು ಉತ್ತರಕ್ಕೆ ಅಂದರೆ ರಾಜ್ಯದ ಮಧ್ಯದಲ್ಲಿರುವ ಬೀದರಗೆ ರಾಜ್ಯವನ್ನು ವರ್ಗಾಯಿಸಿದರು. ಇದು ಸುರಕ್ಷಿತವಾದ ಸ್ಥಳ ಹೊಂದಿತ್ತು. ಸಾಮ್ರಾಜ್ಯದ ವ್ಯಾಪ್ತಿಯು ವಿಶಾಲವಾಗಿ ಹೊಂದಿರಲಿಲ್ಲ. ಆದರು ಇವರು ಕೈಗೊಂಡ ಸಾಧನೆಗಳ ಪ್ರಮುಖವಾಗಿದ್ದವು ಇವರು ಕೇವಲ ದಾಳಿಕೋರರಾಗಿರದೆ ಉತ್ತಮ ಆಡಳಿತಗಾರರು, ಶಿಕ್ಷಣ, ಸಾಹಿತ್ಯ ಪೊಷಕರು, ಕಲಾ ಆರಾಧಕರು ಆಗಿದ್ದರು. ಇವರ ಕಾಲದಲ್ಲಿ ಧಾರ್ಮಿಕವಾಗಿ ಅನೇಕ ಸೂಫಿ ಸಂತರು ದಕ್ಷಿಣಕ್ಕೆ ಬಂದು ನೆಲಸಿದರು. ಇವರು ವಿದೇಶಿಯರಾದ ಅಫಾಕೀಯರನ್ನರಿಗೆ ತಮ್ಮ ರಾಜ್ಯದಲ್ಲಿ ಅನೇಕ ಉನ್ನತ ಹುದ್ದೆಗಳನ್ನು ನೀಡಿದರು. ದಖ್ಖನಿನಲ್ಲಿ ಒಂದು ಮಿಶ್ರ ಸಂಸ್ಕೃತಿಯು ಪ್ರಾರಂಭವಾಯಿತು. ಇಲ್ಲಿ ಬೀದರಿ ಕಲೆಯು ವಿಶ್ವಪರಂಪರೆಯಾಗಿ ಬೆಳೆಯಿತು.

ಬಹಮನಿ ರಾಜ್ಯವು ವಿಘಟನೆಯಾದ ನಂತರ ಐದು ರಾಜಮನೆತನಗಳಾಗಿದ್ದವು. ಅವುಗಲ್ಲಿ ಬಿಜಾಪುರದ ಆದಿಲ್‌ಷಾಹಿಯು ಪ್ರಮುಖವಾದದ್ದು ಇವರು ದಖ್ಖನಲ್ಲಿ ತಮ್ಮ ಪ್ರಾಬಲ್ಯ ಪುನರ್ ಸ್ಥಾಪಿಸಲು ೧೫೨೮ ರವರೆಗೆ ಬೀದರನ ಬಹಮನಿಯ ನೇರವಿನೊಂದಿಗೆ ವಿಜಯನಗರ ಹಾಗು ಗಜಪತಿ ದೊರೆಗಳೊಂದಿಗೆ ಅನೇಕ ಯುದ್ಧಗಳು ನಡೆಸಿದರು. ಅವರು ಕೈಗೊಂಡ ಕಾಳಗಗಳನ್ನು ಇಲ್ಲಿ ಸ್ವಲ್ಪ ಮಟ್ಟಿಗೆ ವಿವರಿಸಲಾಗಿದೆ. ಈ ಅಧ್ಯಾಯನದ ವ್ಯಾಪ್ತಿಯಲ್ಲಿ ಬಹಮನಿ ಸುಲ್ತಾನ ಮಾಡಿದ ಕಾಳಗಗಳು ಕಾಲಾನುಕ್ರಮವಾಗಿ ವಿವರಿಸಲಾಗಿದೆ. ಅಲ್ಲದೆ ಕಾಳಗಕ್ಕೆ ಪ್ರಮುಖವಾದ ಕಾರಣ ಮತ್ತು ಕಾಳಗದಲ್ಲಿ ಭಾಗವಹಿಸಿದ ಅರಸರು, ನಾಯಕರು ಹಾಗೂ ಕಾಳಗದಿಂದಾದ ಪರಿಣಾಮವನ್ನು ಸಹ ಒಳಗೊಂಡಿದೆ.

**ಗೃಹಿಕೆಗಳು :**

೧ ಬಹಮನಿ ಸಾಮ್ರಾಜ್ಯವು ದಕ್ಷಿಣ ಭಾರತದಲ್ಲಿ ಮುಸ್ಲಿಂ ಸಾಮ್ರಾಜ್ಯ ಸ್ಥಾಪಿಸುವಲ್ಲಿ ಪ್ರಮುಖ ಪಾತ್ರ ನಿರ್ವಹಿಸಿತು.

೨ ಬಹಮನಿ ಸಾಮ್ರಾಜ್ಯ ದಕ್ಷಿಣ ಭಾರತದಲ್ಲಿ ಸ್ಥಾಪನೆಯಾಗುವುದರೊಂದಿಗೆ ಉತ್ತರದಲ್ಲಿ ನಡೆದಂತಹ ಒತ್ತಾಯದ ಮತಾಂತರ ನಡೆಯಿತು.

೩ ಬಹಮನಿ ಮತ್ತು ವಿಜಯನಗರದ ನಡುವೆ ಸರಣಿ ಕಾಳಗಗಳು ನಡೆಯಲು ದೋಅಬ್ ಪ್ರದೇಶವೆ' ಕಾರಣವಾಗಿತ್ತು.

೪ ಬಹಮನಿಯರು ಜಿಹಾದ್ ಸಿದ್ಧಾಂತದಲ್ಲಿ ನಂಬಿಕೆ ಹೊಂದಿದ್ದು ಹಿಂದೂ ಧರ್ಮವನ್ನು ದುರ್ಬಲಗೊಳಿಸುವ ಆಸೆ ಹೊಂದಿದ್ದರು

೫ ಬಹಮನಿ ಮತ್ತು ಅನ್ಯ ಮನೆತನಗಳ ನಡುವೆ ಕಾಳಗಗಳು ನಡೆಯಲು ಸಂಪತ್ತಿನ ವ್ಯಾಮೋಹವೇ ಕಾರಣವಾಗಿತ್ತು.

೬ ಬಹಮನಿ ಅರಸರು ಕದನಗಳಲ್ಲಿ ಸೋಲಲು ಆಂತರಿಕ ದಂಗೆಗಳೆ ಕಾರಣವಾಗಿದ್ದವು.

೭ ಬಹಮನಿ ಸಾಮ್ರಾಜ್ಯ ಒಡೆದು ೫ ಷಾಹಿ ಮನೆತನಗಳಾಗಿ ರೂಪಗೊಳ್ಳಲು ಅಧಿಕಾರದ ಲಾಲಸೆಯೆ ಕಾರಣವಾಗಿತ್ತು

೮ ಮಧ್ಯಯುಗೀನ ಸಾಮ್ರಾಜ್ಯ ವಿಸ್ತರಣಾ ನೀತಿ ಅವರಲ್ಲಿ ದ್ವೇಷ-ವೈಷಮ್ಯಗಳನ್ನು ಸೃಷ್ಟಿಸಿದವು.

೯ ವಿಜಯನಗರದ ಅರಸರು ಹಿಂದೂ ಧರ್ಮದ ರಕ್ಷಣೆಗಾಗಿ ಅನಿವಾರ್ಯತೆಯಿಂದ ಬಹಮನಿಯರ ಜೊತೆ ಹೋರಾಟಕ್ಕಿಳಿದರು.

೧೦ ಬಹಮನಿಯರಲ್ಲಿದ್ದ ಬೃಹತ್ ಸೈನ್ಯ ಆಧುನಿಕ ಶಸ್ತ್ರಾಸ್ತ್ರಗಳು ಇತರರ ಮೇಲೆ ದಾಳಿ ಮಾಡಲು ಪ್ರೇರೆಪಿಸಿದವು.

## ಸಂಶೋಧನಾ ವಿಧಾನ :

ಪ್ರಸ್ತುತ ಅಧ್ಯಯನವು ಪ್ರಾಥಮಿಕ ಹಾಗೂ ಮಾಧ್ಯಮಿಕ ವಿಷಯ ಹಾಗೂ ಅಂಕಿ-ಆಂಶಗಳ ಮಾಹಿತಿಯ ಮೇಲೆ ಅವಲಂಬಿಸಿದೆ. ಈ ಸಂಶೋಧನಾ ವಿಷಯದಲ್ಲಿ ಐತಿಹಾಸಿಕ ಘಟನೆಗಳನ್ನು ತಿಳಿದುಕೊಳ್ಳಲು ಅನೇಕ ಮೂಲಗಳಿಂದ ವಿಷಯ ತೆಗೆದುಕೊಳ್ಳಲಾಗಿದೆ. ವಿಷಯ ಸಂಗ್ರಹಿಸುವಲ್ಲಿ ಅನೇಕ ರೀತಿಯ ವಿಧಾನಗಳನ್ನು ಬಳಸಲಾಗಿದೆ. ಪ್ರಮುಖವಾಗಿ ಝುರಾಕ್ಸ ಪದ್ದತಿ, ಟಿಪ್ಪಣಿಗಳನ್ನು ಬರೆದುಕೊಳ್ಳವುದು, ಪ್ರಮುಖ ಲೇಖನೆಗಳು, ನಿಯತಕಾಲಿಕದಲ್ಲಿ ಪ್ರಕಟಗೊಂಡ ಬರಹಗಳು, ಕೈಪಿಡಿಗಳು ಮುಂತಾದವುಗಳನ್ನು ಸಂಶೋಧನಾ ವಿಧಾನವಾಗಿ ಬಳಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಪ್ರಾಥಮಿಕ ಆಕರಗಳಾಗಿ ಬಹಮನಿ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಫರ್ಮಾನಾಗಳು, ಕಡತಗಳು, ದಾಖಲೆ ಪತ್ರಗಳು, ಸಮಕಾಲಿನ ಬರಹಗಳು, ಬಹಮನಿ ಹಾಗೂ ವಿಜಯನಗರಕ್ಕೆ ಭೇಟಿ ನೀಡಿದ ಸಮಕಾಲಿನ ಪ್ರವಾಸಿಗರ ದಾಖಲೆಗಳು, ಬಹಮನಿ ಹಾಗೂ ವಿಜಯನಗರಕ್ಕೆ ಸಂಬಂಧಿಸಿದ ಶಾಸನಗಳು, ನಾಣ್ಯಗಳು, ಸ್ಮಾರಕಗಳ ಮೇಲೆ ಬರೆದ ಬರಹಗಳು ಮುಂತಾದವುಗಳನ್ನು ಈ ಅಧ್ಯಯನಕ್ಕೆ ಪ್ರಾಥಮಿಕ ಆಕರಗಳಾಗಿ ಬಳಸಿಕೊಳ್ಳಲಾಗಿದೆ.

ಬಹಮನಿ ಕಾಳಗಗಳು ಎಂದು ವಿಷಯವನ್ನು ಆಯ್ದುಕೊಂಡ ನಂತರ ನಾನು ಕೇಲವು ಮಾಧ್ಯಮಿಕ ಆಧಾರಗಳಾಗಿ ಅನೇಕ ಪುಸ್ತಕಗಳನ್ನು ನೋಡಿದನು. ಅವುಗಳೆಂದರೆ ಮೂಲತ: ರಾಬರ್ಟ್ ಸೆವೆಲ್ ಬರೆದ "ಮರೆತುಹೋದ ಮಹಾಸಾಮ್ರಜ್ಯ ವಿಜಯನಗರ" ಇದನ್ನು ಸದಾನಂದ ಕನವಳ್ಳಿಯವರು ಕನ್ನಡದಲ್ಲಿ ಅನುವಾದಿಸಿದ್ದಾರೆ.. ಈ ಪುಸ್ತಕವನ್ನು ಪ್ರಮುಖ ಮಾಧ್ಯಮಿಕ ಆಕರವಾಗಿ ಬಳಸಿಕೊಳ್ಳಲಾಗಿದೆ.

ಎಚ್. ತಿಪ್ಪೇರುದ್ರಸ್ವಾಮಿಯವರು 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ', ಎಸ್.ಎನ್. ಶಿವರುದ್ರಸ್ವಾಮಿಯವರ 'ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ', ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಪ್ರಕಾಶನದ 'ಕರ್ನಾಟಕ ಪರಂಪರೆ', ಸಂಪುಟ-೨, ಡಾ. ಮುನಿಸ್ವಾಮಿ ಆರ್. ಸಂಪಾದಕರು ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ವಿಜಾಪುರ ಜಿಲ್ಲೆ, ಎಂ.ಬಿ ಪಾಟೀಲರ ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ, ಅಂತರ ಜಾಲದಲ್ಲಿ ಬಹಮನಿ ಸಂಬಂಧಿಸಿದ ಮಾಹಿತಿಗಳು, ಕೆ.ಎ ನೀಲಕಂಠಶಾಸ್ತ್ರಿಯರ ಎ ಹಿಸ್ಟರಿ ಆಫ್ ಸೌತ್ ಇಂಡಿಯಾ, ಶೇಖ ಅಲಿ.ಬಿ.ಯವರ ಕರ್ನಾಟದ ಇತಿಹಾಸದ ಸಂಪುಟಗಳು, ಎಚ್.ಕೆ ಶೇರವಾನಿಯವರ 'ಮಧ್ಯಯುಗೀನ ದಖನ್ನನ ಇತಿಹಾಸ' ಪಿ.ಎನ್. ಚೋಪ್ರಾ ಬರೆದ ಹಿಸ್ಟರಿ ಆಫ್ ಸೌತ ಇಂಡಿಯಾ ಈ ಪುಸ್ತಕಗಳು ಸಂಶೋಧನೆ ವಿಷಯಕ್ಕಾಗಿ ಬಳಲಾಗಿದೆ.

ಬಹಮನಿ ಮನೆತನದ ಸಾಮಾಜಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ, ವಿಷಯಗಳಿಗೆ ಸಂಬಂಧ ಪಟ್ಟಂತೆ ಬಹಮನಿ ರಾಜ್ಯದ ಕುರಿತು ಲಭಿಸುವ ಎಲ್ಲಾ ರೀತಿಯ ಆಕರಗಳನ್ನು ಬಳಕೆಮಾಡಿಕೊಳ್ಳಲಾಗಿದೆ.

## ಅಧ್ಯಯನದ ಸಂಯೋಜನೆ :

ಈ ಕಿರು ಪ್ರಬಂಧದ ಪ್ರಥಮ ಅಧ್ಯಯನದಲ್ಲಿ ಪ್ರವೇಶದೊಂದಿಗೆ ಬಹಮನಿ ಮನೆತನದ ಸಂಪೂರ್ಣ ಸಂಕ್ಷಿಪ್ತ ಕಿರು ಪರಿಚಯ ನೀಡಲಾಗಿದ್ದು. ನಂತರ ಅಧ್ಯಯನದ ಉದ್ದೇಶ, ವ್ಯಾಪ್ತಿ, ಕೈಗೊಂಡ ಅಧ್ಯಯನದ ವಿಧಾನ, ಬಳಸಿದ ಆಕಾರಗಳ ಕುರಿತು ಮಾಹಿತಿ ನೀಡಲಾಗಿದೆ. ಅಲ್ಲದೆ ಇದರಡಿ ಅಧ್ಯಯನದ ವಿಷಯಕ್ಕೆ ಸಂಭಂದಪಟ್ಟ ಗೃಹಿಕೆಗಳು ಹಾಗೂ ಮಹತ್ವವನ್ನು ಕಾಣಬಹುದಾಗಿದೆ.

ಪ್ರಬಂಧದ ದ್ವಿತೀಯ ಅಧ್ಯಾಯದಲ್ಲಿ ಬಹಮನಿ ಸಾಮ್ರಾಜ್ಯದ ಚಾರಿತ್ರಿಕ ಮತ್ತು ಐತಿಹಾಸಿಕ ಹಿನ್ನಲೆಯನ್ನು ಕುರಿತು ವಿವರಿಸಲಾಗಿದೆ. ಬಹಮನಿ ಮನೆತನವು ಮೂಲತ: ಗುಲಬರ್ಗಾದಲ್ಲಿ ಸ್ಥಾಪನೆಯಾಗಿರುವುದರಿಂದ ಗುಲಬರ್ಗಾ ಹೆಸರಿನ ಮೂಲ ಅದರ ಭೌಗೋಳಿಕ ಲಕ್ಷಣಗಳನ್ನು ಕುರಿತು ವಿವರಿಸಲಾಗಿದೆ. ನಂತರ ದಕ್ಷಿಣ ಭಾರತಕ್ಕೆ ಮಹಮದೀಯರ ಆಗಮನ ಮತ್ತು ಅವರ ಆಳ್ವಿಕೆಯ ಆರಂಭದ ಬಗ್ಗೆ ವಿವರಣೆ ನೀಡಲಾಗಿದೆ. ಬಹಮನಿ ಸಾಮ್ರಾಜ್ಯದ ಸ್ಥಾಪನೆಗೆ ಕಾರಣವಾದ ಅಂಶಗಳು ಹಾಗೂ ಅದಕ್ಕೆ ಸಂಭಂದಪಟ್ಟ ಐತಿಹ್ಯಗಳನ್ನು ಇಲ್ಲಿ ವಿವರಿಸಲಾಗಿದೆ.

ಪ್ರಬಂಧದ ಮೂರನೇ ಅಧ್ಯಾಯದಲ್ಲಿ ಬಹಮನಿ ಮನೆತನ ೧೩೪೭ ರಲ್ಲಿ ಸ್ಥಾಪನೆಯಾದಾಗಿನಿಂದ ಕಾಲಾನುಕ್ರಮಣಿಯಲ್ಲಿ ಆಳಿದ ಅರಸರ ಆಳ್ವಿಕೆಯ ಕಿರು ಪರಿಚಯದೊಂದಿಗೆ ಬಹಮನಿ ಮನೆತನದ ಸಂಪೂರ್ಣ ವಂಶಾವಳಿಯ ಚಿತ್ರವನ್ನು ರೇಖಾ ಚಿತ್ರದ ಮೂಲಕ ನಿರೂಪಿಸಲಾಗಿದೆ.

ಪ್ರಬಂಧದ ನಾಲ್ಕನೇ ಅಧ್ಯಾಯದಲ್ಲಿ ಬಹಮನಿ ಮನೆತನದ ಸ್ಥಾಪನೆಯಿಂದ ಹಿಡಿದುಕೊಂಡು ಅದರ ಸ್ಥಾಪನೆಗೆ ಕಾರಣವಾದ ಅಂಶಗಳು ಹಾಗೂ ದಕ್ಷಿಣ ಭಾರತದಲ್ಲಿನ ರಾಜಕೀಯ ಪರಿಸ್ಥಿತಿ

'ಮತ್ತು ಬಹಮನಿ ಮನೆತನ ಹಾಗೂ ಅನ್ಯ ಮನೆತನಗಳ ಜೊತೆಗೆ ಅದರಲ್ಲೂ ವಿಶೇಷವಾಗಿ ವಿಜಯನಗರದ ಅರಸರೊಡನೆ ನಡೆದ ಬಹುತೇಕ ಎಲ್ಲಾ ಕಾಳಗಗಳಿಗೆ ಕಾರಣವಾದ ಅಂಶಗಳ ವಿವರಣೆಯನ್ನು ಕ್ರೋಢಿಕರಿಸಲಾಗಿದೆ.

ಪ್ರಬಂಧದ ಐದನೇ ಆಧ್ಯಾಯದಲ್ಲಿ ಈ ಕಿರು ಪ್ರಬಂಧದ ಕಳಶವಾಗಿದೆ. ಕಾರಣ ಇಲ್ಲಿ ಬಹಮನಿ ಮತ್ತು ವಿಜಯನಗರ ಹಾಗೂ ಇನ್ನಿತರ ಅರಸು ಮನೆತನಗಳೊಡನೆ ನಡೆದಂತಹ ಹತ್ತು ಹಲವು ಐತಿಹಾಸಿಕ, ಚಾರಿತ್ರಿಕ, ನಿರ್ಣಾಯಕ ಕಾಳಗಗಳ ಕಾರಣಗಳು, ಘಟನೆಗಳು, ಅದರಿಂದಾದ ಪರಿಣಾಮ ಹಾಗೂ ಬದಲಾವಣೆಗಳ ಚಾರಿತ್ರಿಕ ಹಿನ್ನಲೆಯನ್ನು ಇಲ್ಲಿ ಸೆರೆ ಹಿಡಿಯಲಾಗಿದೆ.

ಪ್ರಬಂಧದ ಕೊನೆಯ ಅಧ್ಯಾಯವಾದ ಸಮಾರೋಪದಲ್ಲಿ ಸಂಶೋಧನೆಯನ್ನು ಕೈಗೊಂಡು ಹಲವು ದಾಖಲೆಗಳನ್ನು ಪುಸ್ತಕಗಳನ್ನು ಗಮನಿಸಿ, ಅಲ್ಲದೇ ಹಲವಾರು ಉಪನ್ಯಾಸಕರುಗಳ ಜೊತೆ ಚರ್ಚಿಸಿ, ತಿಳಿದುಕೊಂಡ ಮಾಹಿತಿಯನ್ನು ಸಮತೋಲನವಾಗಿ ವಿವರಿಸಲಾಗಿದೆ. ಈ ಮೊದಲು ಬಹಮನಿಯರ ಬಗ್ಗೆ ಹಲವು ವಿಷಯನಗಳಲ್ಲಿ ಗೊಂದಲದಲ್ಲಿದ್ದ ನಾನು ಈ ಅಧ್ಯಯನದ ನಂತರ ಹೊಸತಾದ ಅನೇಕ ಅಂಶಗಳನ್ನು ಕಂಡುಕೊಂಡಿದ್ದು ಅವುಗಳನ್ನು ನನ್ನಾಭಿಪ್ರಾಯದ ಮೂಲಕ ಇಲ್ಲಿ ಬಿತ್ತರಿಸಿದ್ದೇನೆ.

**

# ಅಧ್ಯಾಯ-೨

# ಬಹಮನಿ ಸಾಮ್ರಾಜ್ಯದ ಹಿನ್ನಲೆ

## ೨.೧ ಭೌಗೋಳಿಕ ಹಿನ್ನಲೆ :

ಬಹಮನಿ ರಾಜಮನೆತನವು ದಖ್ಖನ ಪ್ರಸ್ಥಭೂಮಿಯ ಸಮತಟ್ಟವಾದ ಪ್ರದೇಶದ ಮಧ್ಯಭಾಗದಲ್ಲಿರುವ ಗುಲಬರ್ಗಾದಲ್ಲಿ ಸ್ಥಾಪನೆಯಾಗಿತ್ತು. ಗುಲಬರ್ಗಾ ಪ್ರದೇಶ ಹೆಚ್ಚಿನ ಭಾಗ ಡೆಕ್ಕನ್ ಟ್ರ್ಯಾಪ್ ಶಿಲಾ ಪ್ರದೇಶವಾಗಿದೆ. ಜಿಲ್ಲೆಯ ಮಧ್ಯದ ಭಾಗದಲ್ಲಿ ಸ್ವಲ್ಪ ಮಟ್ಟಿಗೆ ಭೀಮಾ ವರ್ಗಕ್ಕೆ ಸೇರಿದ ಸುಣ್ಣಕಲ್ಲು ಮತ್ತು ಶೇಲ್ ಪದರ್‌ಗಳಿವೆ ದಕ್ಷಿಣ ಮತ್ತು ಪೂರ್ವದ ಅಂಚಿನ ಹಲವಡೆಗಳಲ್ಲಿ ಬಹು ಪ್ರಾಚೀನವಾದ ಪೆನಿನ್ಸುಲರ್ ನೈಸ್ ಮತ್ತು ಧಾರವಾಡ ವರ್ಗಕ್ಕೆ ಸೇರಿದ ಶಿಲೆಗಳು ಕಂಡು ಬರುತ್ತವೆ. ಜಿಲ್ಲೆಯು ಭಾರತದ ದಕ್ಷಿಣದ ಪ್ರಸ್ಥಭೂಮಿಯ ಭಾಗವಾಗಿದ್ದು ಉತ್ತರದಿಂದ ದಕ್ಷಿಣಕ್ಕೆ ಇಳಿಜಾರಾಗಿದೆ. ಇಡಿ ಪ್ರದೇಶ ಸಾಮಾನ್ಯವಾಗಿ ಸಮುದ್ರ ಮಟ್ಟದಿಂದ ೩೦೦ ರಿಂದ ೬೦೦ ಮೀಟರ್ ಎತ್ತರದಲ್ಲಿದೆ.

ಈ ಟ್ರ್ಯಾಪ್‌ಗಳ ಅತ್ಯಂತ ಗಮನೀಯವಾದ ಲಕ್ಷಣವೆಂದರೆ ಇವುಗಳ ಪರಿಪೂರ್ಣವಾದ ಮಟ್ಟಸ ರಚನೆ, ಒಂದೊಂದು ಪ್ರವಾಹವೂ ೬ ರಿಂದ ೨೪ ಮೀಟರ್ ದಪ್ಪದವರೆಗಿನದು. ಉದ್ದವಾದ ಗೀರುಗಳಿಂತಿರುವ ಬಿರುಕುಗಳಿಂದ ಈ ದ್ರವರೂಪಿ ಶಿಲಾರಸವು ಉಕ್ಕಿ ಬಂದು ೧೦೦ ಕಿ.ಮಿ ಅಥವಾ ಅದಕ್ಕೂ ಹೆಚ್ಚು ವಿಸ್ತಾರವಾದ ಪ್ರದೇಶದ ಮೇಲೆ ಹರಿದು ಶಿಲಾರಸದ ಗುಡ್ಡೆಗಳು ಉಂಟಾದವು. ಈ ಶಿಲಾರಸದ ಗುಡ್ಡೆಗಳು ಮೊದಲು ಉಂಟಾದ ಶಿಲಾರಚನೆಯ ಮೇಲೆ ಹೊದಿಕೆಯಂತೆ ಮುಚ್ಚಿಕೊಂಡಿದ್ದು ನಂತರ ಸವೆತಕ್ಕೆ ಈಡಾದವು.

ಗುಲಬರ್ಗಾ ಪ್ರದೇಶವು ಕರ್ನಾಟಕದ ಉತ್ತರ ಭಾಗದಲ್ಲಿದು. ಇದು ೧೯೫೬ ರ ನಂತರ ಹೈದ್ರಾಬಾದ ಕರ್ನಾಟಕ ಪ್ರದೇಶದಿಂದ ಅಂದಿನ ಮೈಸೂರಯ ರಾಜಕ್ಕೆ ಸೇರಿದೆ. ಗುಲಬರ್ಗಾ ಒಂದು ಜಿಲ್ಲೆಯಾಗಿರದೆ ಬೀದರ, ಗುಲಬರ್ಗಾ, ರಾಯಚೂರು, ಕೊಪ್ಪಳ, ಬಳ್ಳಾರಿ ಒಳಗೊಂಡ ವಿಭಾಗ ಮಟ್ಟವಾಗಿ ಬೆಳೆದಿದೆ. "ಗುಲಬರ್ಗಾ ವಿಶಾಲವಾದ ಸಮತಟ್ಟಾದ ಪ್ರದೇಶ ಹೊಂದಿದ್ದು ಇದು ೭೬°೦೪ ಮತ್ತು ೭೭°.೪೨ ಪೂರ್ವರೇಖಾಂಶ ಹಾಗೂ ೧೬.° ೧೨ ಮತ್ತು ೧೭°.೪೬ ಉತ್ತರ ಅಕ್ಷಾಂಶಗಳ ನಡುವೆ ಹರಡಿಕೊಂಡಿದೆ."[೧] ಕಪ್ಪು ಮಣ್ಣಿನ ತೇವಾಂಶ ಭರಿತ ಹವಾಮಾನ ಒಳಗೊಂಡಿದೆ.

ಪ್ರಾಚೀನ ಕಾಲದಿಂದಲು ಉತ್ತಮ ಹವಾಮಾನ ಹೊಂದಿದ ಈ ಪ್ರದೇಶವು ಜನವಸತಿಗೆ ಯೋಗ್ಯವಾಗಿದ್ದು, ಇಲ್ಲಿ ಅನೇಕ ರಾಜಮನೆತನಗಳು ಬೆಳೆದುಬಂದಿದ್ದವು. ಬಹಮನಿ ರಾಜಮನೆತನ ಸ್ಥಾಪನೆಯಾದ ನಂತರ ಇವರ ರಾಜ್ಯವು ಅನೇಕ ಪ್ರದೇಶಗಳನ್ನು ಒಳಗೊಂಡಿತ್ತು. ಕರ್ನಾಟಕದ ಬಿಜಾಪುರ, ಬೀದರ, ಮುದಗಲ್, ರಾಯಚೂರ, ಭೀಮಾ, ಕೃಷ್ಣ, ತುಂಗಾಭದ್ರ, ನದಿಗಳ ನಡುವಿನ ದೋಆಬ್ ಪ್ರದೇಶ ತೆಲಂಗಾಣದ ವಾರಂಗಲ್‌ವರೆಗೆ ಇವರ ಭೌಗೋಳಿಕ ನೆಲೆ ಒಳಗೊಂಡಿತ್ತು. ಬಹಮನಿ ರಾಜ್ಯವು ೧೫ ರಿಂದ ೨೦ ಉತ್ತರ ಅಕ್ಷಾಂಶ ಹಾಗೂ ಪೂರ್ವಕರಾವಳಿಯ ೭೩ ರೇಖಾಶದಿಂದ ೭೮. ಪೂರ್ವರೇಖಾಂಶಗಳ ನಡುವೆ ವಿಶಾಲವಾದ ಪ್ರದೇಶ ಒಳಗೊಂಡಿತ್ತು. ಈ ಭೌಗೋಳಿಕ ನೆಲೆಯಲ್ಲಿ ದಟ್ಟ ಅರಣ್ಯಗಳು, ಕಣಿವೆಗಳು, ಸಮತಟ್ಟಾದ ಭೂಮಿ, ಗಟ್ಟಿ ಶಿಲೆಯಿಂದ ನಿರ್ಮಿತವಾದ ಗುಡ್ಡಗಾಡು ಪ್ರದೇಶ, ಅನೇಕ ನದಿಗಳನ್ನು ಕಾಣಬಹುದಾಗಿದೆ. ಈ ವಿಶಾಲವಾದ ಭೌಗೋಳಿಕ ಪ್ರದೇಶದಲ್ಲಿ ಕೃಷ್ಣಾ, ಭೀಮಾ, ತುಂಗಭದ್ರ, ಗೋದಾವರಿ, ಮಾಂಜ್ರಾ, ಮೂಸಿ, ಮುಂತಾದ ನದಿಗಳು ಹರಿಯುತಿದ್ದವು. ಈ ನದಿಗಳು ಹರಿಯುದರಿಂದ ಈ ಪ್ರದೇಶ ಫಲವತ್ತತೆ ಮತ್ತು ಸಂಪತ್ತ ಭರಿತವಾಗಿತ್ತು. ಜನಸಂಖ್ಯೆಯು ದಟ್ಟನೆಯಿಂದ ಕುಡಿದ್ದು ಇಲ್ಲಿಯ ಜನರು ಕಷ್ಟ ಸಹಿಷ್ಣುಗಳು, ಹೋರಾಟ ಮನೋಭಾವದವರು, ಸ್ವಾತಂತ್ರ ಪ್ರವೃತ್ತಿ ಉಳ್ಳವರಾಗಿದ್ದರು.

## ೨.೨ ಚಾರಿತ್ರಿಕ ಹಿನ್ನಲೆ :

ದಖನ್ ಪ್ರಸ್ಥಭೂಮಿಯ ಕರ್ನಾಟಕದ ಉತ್ತರ-ಪೂರ್ವಕ್ಕೆ ಬಹಮನಿ ರಾಜಮನೆತನವು ಸ್ಥಾಪನೆ ಹೊಂದಿದ್ದು. ಇದು ಪ್ರಾರಂಭದಲ್ಲಿ ಗುಲಬರ್ಗಾವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ನಂತರ ಬೀದರಗೆ ರಾಜಧಾನಿಯನ್ನು ಬದಲಾಯಿಸಲಾಯಿತು. ಇವರ ರಾಜ್ಯವು ಕರ್ನಾಟಕದಲ್ಲಿ ಬೀದರ, ರಾಯಚೂರ, ಬಿಜಾಪುರ, ಕೊಪ್ಪಳ, ಮುಂತಾದ ಪ್ರದೇಶಗಳನ್ನು ಒಳಗೊಂಡಿತ್ತು. ಈ ಪ್ರದೇಶ ಪ್ರಾಚೀನ ಕಾಲದಿಂದಲೂ ಸಾಂಸ್ಕೃತಿಕ ಐತಿಹಾಸಿದ ಕೇಂದ್ರವಾಗಿತ್ತು. ಈ ಪ್ರದೇಶವು ದೊರಕಿದಂತ ಶಾಸನಗಳು ಸ್ಮಾರಕಗಳು ಮತ್ತು ಸಾಹಿತ್ಯಿಕ ಕೃತಿಗಳು ಐತಿಹಾಸಿಕ ಹಿನ್ನಲೆಯ ಮೇಲೆ ಬೆಳಕು ಚೆಲ್ಲಬಹುದಾಗಿದೆ.

ರಾಜಕೀಯವಾಗಿ ಗುಲಬರ್ಗಾ ಪ್ರದೇಶವು ಆಯಕಟ್ಟಿನ ಸ್ಥಳ ಹೊಂದಿದ್ದು ಇದು ಆರಂಭದಲ್ಲಿ ಮೌರ್ಯರ ಆಡಳಿತಕ್ಕೆ ಒಳಪಡ್ಡಿತ್ತು. ಮೌರ್ಯರು ಹೊಂದಿದ ವಿಶಾಲವಾದ ಸಾಮ್ರಾಜ್ಯದಲ್ಲಿ ಈ

ಪ್ರದೇಶವು ಒಂದು. ಇಲ್ಲಿ ಅಶೋಕನ ಕಾಲದ ಅನೇಕ ಶಾಸನಗಳು ದೊರೆತಿವೆ ೧೯೧೫ ರಲ್ಲಿ ದೊರಕಿದ ರಾಯಚೂರು ಜಿಲ್ಲೆಯ 'ಮಸ್ಕಿ' ಶಾಸನವು 'ದೇವನಾಮಪ್ರಿಯ ಅಶೋಕ' ಎಂಬುದಾಗಿ ಹೆಸರನ್ನು ಸೂಚಿಸುವ ಮೂಲಕ ಅಶೋಕನ ಆಳ್ವಿಕೆ ಸೂಚಿಸುತ್ತದೆ. ಕ್ರಿ.ಶ.ಪೂ ೨೩೦ ರಲ್ಲಿ ಮೌರ್ಯ ಸಾಮ್ರಾಜ್ಯದ ಪತನಾ ನಂತರ ಶಾತವಾಹನರು ಸ್ವತಂತ್ರವಾಗಿ ಆಳ್ವಿಕೆ ಆರಂಭಿಸಿದರು. ಕ್ರಿ.ಶ ೮೦-೧೪೦ ವರೆಗೆ ಶಾತವಾಹನರ ಸಾಮ್ರಾಜ್ಯದ ವಿಸ್ತರಣೆ ವಿದರ್ಭದಿಂದ ಬನವಾಸಿಯವರೆಗೆ ಹರಡಿತ್ತು. ಈ ಮಧ್ಯ ಗಲಬರ್ಗಾ ಪ್ರದೇಶವು ಅದರ ವ್ಯಾಪ್ತಿಗೆ ಸೇರಿತು. ಸನ್ನತಿಯಲ್ಲಿ ದೊರೆತ ಅವರ ಕಾಲದ ಸ್ಮಾರಕ ಅವಶೇಷಗಳು ಶಾಸನಗಳು ಈ ಪ್ರದೇಶ ಅವರ ಆಳ್ವಿಕೆ ಒಳಪಟ್ಟಿತ್ತು ಎಂದು ತಿಳಿಸುತ್ತವೆ. ಸನ್ನತಿಯು ಮೊದಲಿಗೆ ಸುಪ್ರಸಿದ್ಧ ಬೌದ್ಧ ಕೇಂದ್ರವಾಗಿತ್ತು. ನಂತರ ಬಾದಾಮಿ ಚಾಲುಕ್ಯರ ಕಾಲದಲ್ಲಿ ಸಂಪೂರ್ಣವಾಗಿ ಗುಲಬರ್ಗಾ ಪ್ರದೇಶವು ಅದರ ಆಳ್ವಿಕೆಗೆ ಒಳಪಟ್ಟಿತ್ತು. ಚಾಲುಕ್ಯರ ಅರಸ ಎರಡನೇ ಪುಲಕೇಶಿಯು ರಾಷ್ಟ್ರಕೂಟರ ಮಾಂಡಲಿಕರಾದ ಅಪ್ಪಾಯಿಕ ಮತ್ತು ಗೋವಿಂದ ರಾಯರನ್ನು ಭೀಮ ನದಿ ದಡದ ಮೇಲೆ ಸೋಲಿಸಿದರಿಂದ. ಕ್ರಿ.ಶ ೫೩೮ ರಿಂದ ೭೫೩ ರವರೆಗೆ ಈ ಪ್ರದೇಶವು ಚಾಲುಕ್ಯರ ಅಧಿನಕೊಳ್ಳಪಟ್ಟಿತ್ತು. ಕ್ರಿ.ಶ ೭೫೭ ರಲ್ಲಿ ರಾಷ್ಟ್ರಕೂಟರು ಬಾದಾಮಿ ಚಾಲುಕ್ಯರಿಂದ ಸ್ವತಂತ್ರರಾದರು. ಗುಲಬರ್ಗಾ ಪ್ರದೇಶದ ಮಳಖೇಡ ಇವರ ರಾಜಧಾನಿಯಾಗಿತ್ತು. ಸುಮಾರು ಎರಡು ಶತಮಾನಗಳ ಕಾಲ ಆಳ್ವಿಕೆ ಮಾಡಿದರು. ೯೭೩ ರಲ್ಲಿ ರಾಷ್ಟ್ರಕೂಟರ ಅವನತಿಯ ನಂತರ ಕಲ್ಯಾಣ ಚಾಲುಕ್ಯರ ಆಳ್ವಿಕೆ ಒಳಪಟ್ಟಿತ್ತು. ಚಾಲುಕ್ಯರ ಸೋಮೇಶ್ವರನು ರಾಜಧಾನಿಯನ್ನು ಮಳಖೇಡದಿಂದ ಕಲ್ಯಾಣಕ್ಕೆ ವರ್ಗಾಯಿಸಿದ್ದನು. ಕ್ರಿ.ಶ ೧೧೫೭ ಚಾಲುಕ್ಯರ ಪತನ ನಂತರ ಈ ಪ್ರದೇಶವು ಕಳಚೂರಿ ಬಿಜ್ಜಳನ ಆಳ್ವಿಕೆ ಒಳಪಟ್ಟಿತ್ತು. ರಾಷ್ಟ್ರಕೂಟರ ಅಮೋಘವರ್ಷ ನೃಪತುಂಗ ಹಾಗೂ ಕಲ್ಯಾಣ ಚಾಲುಕ್ಯರ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಈ ಪ್ರದೇಶವು ಸಾಂಸ್ಕೃತಿಕವಾಗಿ ಐತಿಹಾಸಿಕವಾಗಿ ಪ್ರಾಮುಖ್ಯತೆ ಪಡೆಯಿತು. ಕಳಚೂರ ಬಿಜ್ಜಳನ ಆಳ್ವಿಕೆಯ ಕಾಲದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ಸಾಮಾಜಿಕ ಧಾರ್ಮಿಕ ಕ್ರಾಂತಿ ಜರುಗಿ ಹನ್ನೆರಡನೆಯ ಶತಮಾನದಲ್ಲಿ ದೇಶದ ಎಲ್ಲೆಡೆಯಿಂದ ಶರಣ-ಶರಣೆಯರು ಆಗಮಸಿ ಕಲ್ಯಾಣವನ್ನು ಪಾವನ ಮತ್ತು ಪ್ರಖ್ಯಾತಗೊಳಿಸಿದರು. ಇದು ಶರಣರ ಬೀಡಾಯಿತು. ಭಕ್ತಿಯ ನಾಡಾಯಿತು. ಅನುಭವ ಮಂಟಪ ಸ್ಥಾಪಿತಗೊಂಡು ವಚನ ಸಾಹಿತ್ಯ ಬೆಳದು ಬದುಕಿಗೆ ನೆಲೆ ಒದಗಿಸಿತು.

ಕ್ರಿ.ಶ ೧೨೦೦ ರಲ್ಲಿ ಈ ಪ್ರದೇಶವು ದೇವಗಿರಿಯ ಯಾದವರು, ದ್ವಾರಸಮುದ್ರದ ಹೊಯ್ಸಳರು, ವಾರಂಗಲನ ಕಾಕತೀಯರ ಪ್ರಭಲ್ಯಕ್ಕೆ ಒಳಪಟ್ಟಿತು. ಕ್ರಿ.ಶ ೧೨೭೧ ರಲ್ಲಿ ಈ ಪ್ರದೇಶ ಸಂಪೂರ್ಣವಾಗಿ ಕಾಕತೀಯರ ವಶವಾಯಿತು.

ದಕ್ಷಿಣ ಭಾರತದ ಮೇಲೆ ಮಹಮ್ಮದಿಯರ ಆಕ್ರಮಣದಿಂದ ಗುಲಬರ್ಗಾ ಮತ್ತು ಬೀದರ ಪ್ರದೇಶವು ಅಲ್ಲಾವುದ್ದೀನ ಖಿಲ್ಜಿಯ ವಶವಾದವು ಕ್ರಿ.ಶ ೧೩೧೮ ರಲ್ಲಿ ಸುಲ್ತಾನ ಮುಬಾರಕ್‌ಶಾಹ ಕಾಕತೀಯರಿಂದ ಬೀದರ ಮತ್ತು ಗುಲಬರ್ಗಾ ಪ್ರದೇಶವನ್ನು ಗೆದ್ದು ಖುಸ್ರೋಖಾನ್‌ನಿಗೆ ನೀಡಿದನು. ನಂತರ ಮಹಮ್ಮದ ಬಿನ್ ತುಘಲಕನ ಕಾಲಕ್ಕೆ ಬೀದರನಲ್ಲಿ ತಾಜುಲ್‌ಮುಲ್ಕ್ ಸರತ್‌ಶಾಹ, ಗುಲಬರ್ಗಾದಲ್ಲಿ

ಅಲಿಶಹನಾಥು, ಸಗರನಾಡಿನಲ್ಲಿ ಬಾಹುದ್ದೀನ್ ಗರ್ಷಫ್ ಎಂಬ ಅಧಿಕಾರಿಗಳಿದ್ದರು. ನಂತರ ದೌಲತಾಬಾದನ ಅಧಿಕಾರಿಯಾದ ಹಸನ್‌ಗಂಗು ದೆಹಲಿ ಸುಲ್ತಾನರ ಸೈನ್ಯಯನ್ನು ಸೋಲಿಸಿ ೧೩೪೭ ರಲ್ಲಿ ಬಹಮನಿ ಮನೆತನವನನು ಸ್ಥಾಪಿಸಿದ. ಗುಲಬರ್ಗಾವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡ. ಗುಲಬರ್ಗಾವನ್ನು 'ಹಸನಾಬಾದ್' ಎಂದು ಹೆಸರಿಸಿದ. ನಂತರ ೧೪೨೫ ರಲ್ಲಿ ಒಂದನೆ ಅಹಮ್ಮದಷಾನು ತನ್ನ ರಾಜಧಾನಿಯನ್ನು ಗುಲಬರ್ಗಾದಿಂದ ಬೀದರಿಗೆ ವರ್ಗಾಯಿಸಿದನು. ಚಾರಿತ್ರಿಕವಾಗಿ ಬಹಮನಿ ರಾಜ್ಯವು ಕರ್ನಾಟಕದ ಬೀದರ ಗುಲಬರ್ಗಾ, ರಾಯಚೂರ, ಕೊಪ್ಪಳ ಬಳ್ಳಾರಿ ಬಿಜಾಪುರ ಜಿಲ್ಲೆಯನ್ನು ಒಳಗೊಂಡಿತ್ತು.

**೨.೩ ದಕ್ಷಿಣ ಭಾರತದಲ್ಲಿ ಮಹಮ್ಮದಿಯರ ಆಗಮನ ಮತ್ತು ಆಳ್ವಿಕೆ :**

ಕ್ರಿ.ಶ ೧೨೦೬ ರಲ್ಲಿ ದೆಹಲಿ ಸುಲ್ತಾನರ ಗುಲಾಮಿ ಮನೆತನ ಕುತುಬ್-ಉದ್-ದಿನ್‌ಐಬಕನಿಂದ ಸ್ಥಾಪನೆಗೊಂಡಿತ್ತು. ನಂತರ ಸುಲ್ತಾನ ಇಲ್ತ್‌ಮಷ್‌ನು ಯುದ್ಧ ಮತ್ತು ಹೋರಾಟದ ಮೂಲಕ ಸಾಮ್ರಾಜ್ಯವನ್ನು ವಿಸ್ತರಿಸಿ ನಿಜವಾದ ಸ್ಥಾಪಕ ಎನಿಸಿಕೊಂಡನು. ಸಾಮಾಜ್ಯದ ಅವನತಿಯನ್ನು ತಡೆದು ಅದರ ಘನತೆಯನ್ನು ಇತ್ತಿ ತೋರಿಸಿದ ಕೀರ್ತಿ ಘಿಯಾಸ್‌ಉದ್‌ದ್ದೀನ್ ಬಲ್ಬನ್‌ಗೆ ಸೇರುತ್ತದೆ. ಅದ್ದರಿಂದ ಇವನನ್ನು ಈ ಸಾಮ್ರಜ್ಯದ ಪುನರ್ ಸ್ಥಾಪಕ ಎಂದು ಕರೆಯಲಾಗಿದೆ. ನಂತರ ದಿನಗಳಲ್ಲಿ ಗುಲಾಮಿ ಸಂತತಿಯನ್ನು ಕೊನೆಗೊಳಿಸಿ ಆಳ್ವಿಕೆಗೆ ಬಂದಂತಹ ಖಿಲ್ಜೀ ಸಂತತಿಯು ಭಾರತದಲ್ಲಿ ಪ್ರಬಲ ಸಾಮ್ರಾಜ್ಯವನ್ನು ಸ್ಥಾಪಿಸಿತು. ಈ ಸಂತತಿಯ ಸುಲ್ತಾನನಾದ ಅಲ್ಲಾವುದ್ದೀನ ಖಿಲ್ಜಿಯು ದೆಹಲಿ ಸುಲ್ತಾನರ ಇತಿಹಾಸದಲ್ಲಿಯೇ ಶ್ರೇಷ್ಟ ದಿಗ್ವಿಜಯದಲ್ಲಿ ಯಶಸ್ವಿಯಾದ ಮೇಲೆ ಮತ್ತು ಮಂಗೋಲರ ದಾಳಿಯ ಭೀತಿಯು ನಿಂತ ಮೇಲೆ ತನ್ನ ಬೃಹತ್ ಸೈನ್ಯವನ್ನು ಕ್ರೋಢಿಕರಿಸಿಕೊಂಡು ದಕ್ಷಿಣದ ರಾಜ್ಯಗಳ ಮೇಲೆ ದಿಗ್ವಿಜಯವನ್ನು ಕೈಗೊಂಡನು. ಉತ್ತರದ ಮೇಲೆ ಜಯಸಾಧಿಸಿದ ಇವನಂತಹ ಮಹತ್ವಾಕಾಂಕ್ಷೆ ಸುಲ್ತಾನನಗೆ ಧಕ್ಷಿಣದಲ್ಲಿ ಅಧಿಕಾರವನ್ನು ಸ್ಥಾಪಿಸಿವುದು ಸ್ವಾಭಾವಿಕವಾಗಿತ್ತು. ದಕ್ಷಿಣದ ಸಿರಿ ಸಂಪತ್ತು ಸಹ ಅವನಂತಹ ಸಾಹಸಿ ಯೋಧನಿಗೆ ಪ್ರೇರಕವಾಗಿದಿತು. ಆಗಿನ ಕಾಲಕ್ಕೆ ದಕ್ಷಿಣದಲ್ಲಿ ನಾಲ್ಕು ಪ್ರಬಲ ರಾಜ್ಯಗಳು ಅಸ್ತಿತ್ವದಲ್ಲಿದ್ದವು. ಅವುಗಳೆಂದರೆ ದೇವಗಿರಿಯಲ್ಲಿ ಯಾದವರ ಮನೆತನದ ರಾಮಚಂದ್ರ ದೇವನು ಅಳುತ್ತಿದ್ದನು. ತೆಲಂಗಾಣದಲ್ಲಿ ಕಾಕತೀಯ ಮನೆತನವು ಆಳುತಿದ್ದು ವಾರಂಗಲ್ ಅದರ ರಾಜಧಾನಿಯಗಿತ್ತು,. ಅದನ್ನು ಮೊದಲನೇ ಪ್ರತಾಪರುದ್ರ ದೇವನು ಆಳುತ್ತಿದ್ದನು.

ಹೊಯ್ಸಳ ರಾಜ್ಯವು ಮೂರನೆ ವೀರಬಲ್ಲಾಳನ ಆಳ್ವಿಕೆಯಲ್ಲಿದ್ದು ಇದರ ರಾಜಧಾನಿ ದ್ವಾರ ಸಮುದ್ರವಾಗಿತ್ತು. ದಖ್ಖನ್ನಿನ ದಕ್ಷಿಣ ತುದಿಯಲ್ಲಿ ಪಾಂಡ್ಯರ ರಾಜ್ಯವಿದ್ದು ಅದನ್ನು ಮಾರವರ್ಮ ಕುಲಶೇಖರ ಎಂಬುವನ್ನು ಆಳುತ್ತಿದ್ದನು. ಅದರ ರಾಜಧಾನಿ ಮಧುರೈ ಅದಲ್ಲದೆ ದಕ್ಷಿಣ ಭಾರತದ ಅನೇಕ ಸಣ್ಣ ಪುಟ್ಟ ರಾಜ್ಯಗಳು ಅಸ್ಥಿತ್ವದಲ್ಲಿದ್ದವು. ದಕ್ಷಿಣದ ಈ ರಾಜ್ಯಗಳ ನಡುವೆ ಮೈತ್ರಿಯಿರದೆ ಸದಾ ತಮ್ಮಲೇ ಒಳಜಗಳಗಿದ್ದು ಸದಾ ಯುದ್ಧದಲ್ಲಿ ನಿರತವಾಗಿದ್ದವು. ದಕ್ಷಿಣದ ರಾಜ್ಯಗಳ ನಡುವಣದ ಅಂತ:ಕಲಹಗಳು ಉತ್ತರದಿಂದ ದಾಳಿಕಾರರನ್ನು ಆಹ್ವಾನಿಸಿದವು.

### ೧) ದೇವಗಿರಿಯ ಮೇಲೆ ದಂಡಯಾತ್ರೆ :

"ದೇವಗಿರಿಯ ರಾಜನಾದ ರಾಮಚಂದ್ರದೇವನು ದೆಹಲಿ ಸುಲ್ತಾನರಿಗೆ ಕಪ್ಪವನ್ನು ಸಲ್ಲಿಸದೆ ಇದ್ದನು. ಹಾಗೂ ಗುಜುರಾತಿನ ಕರ್ಣದೇವ ಮತ್ತು ಅವನ ಮಗಳು ದೇವಲದೇವಿಯವರಿಗೆ ಆಶ್ರಯ ನೀಡಿದ್ದರಿಂದ ಅಲ್ಲಾವುದ್ದೀನನಿಗೆ ದೇವಗಿರಿಯ ಮೇಲೆ ದಾಳಿ ಮಾಡಲು ಪ್ರೇರೆಪಿಸಿತು. ಕ್ರಿ.ಶ ೧೩೦೭ ರಲ್ಲಿ ಅಲ್ಲಾವುದ್ದೀನ ತನ್ನ ಮಹಾನ್ ದಂಡನಾಯಕ ಮಲ್ಲಿಕ್ ಕಾಫೂರನ ನೇತೃತ್ವದಲ್ಲಿ ಸೈನ್ಯ ಕೊಟ್ಟು ದಕ್ಷಿಣಕ್ಕೆ ಕಳುಹಿಸಿದನು. ಈತ ದೇವಗಿರಿಯ ಮೇಲೆ ದಾಳಿಮಾಡಿ ಯುದ್ಧದಲ್ಲಿ ರಾಮಚಂದ್ರದೇವನನ್ನು ಸೋಲಿಸಿದ್ದರಿಂದ ರಾಮಚಂದ್ರದೇವನಗೆ ಸಂಧಾನ ಮಾಡಿಕೊಳ್ಳಬೇಕಾಯಿತು. ಅದರಿಂದ ಕಾಫೂರನು ಅಗಾಧ ಸಂಪತ್ತು ಲೂಟಿ ಮಾಡಿಕೊಂಡು ರಾಮಚಂದ್ರದೇವನಿಗೆ ನವ್ಸಾರಿ ಪ್ರಾಂತವನ್ನು ಬಳುವಳಿಯಾಗಿ ನೀಡಿದ. ಆ ಬಳಿಕ ರಾಮಚಂದ್ರದೇವನು ದೆಹಲಿಯ ಸಾಮ್ರಾಜ್ಯದ ಸಾಮಂತನಾಗಿ ಪ್ರತಿ ವರ್ಷ ಕಪ್ಪು ಕಾಣಿಕೆಗಳನ್ನು ಒಪ್ಪಿಸುತ್ತಾ ಮಲಿಕ್ ಕಾಫೂರನ ದಕ್ಷಿಣ ಧಂಡಯಾತ್ರೆಗಳಿಗೆ ಸೈನಿಕ ಸಹಾಯ ಮಾಡುತ್ತಾ ಆಳ್ವಿಕೆಯನ್ನು ಮುಂದುವರಿಸಿದನು."[೨]

### ೨) ವಾರಂಗಲ್ ಮೇಲೆ ದಂಡಯಾತ್ರೆ :

"ವಾರಂಗಲನಲ್ಲಿ ಕಾಕತೀಯ ಪ್ರತಾಪರುದ್ರನು ಆಳ್ವಿಕೆ ಮಾಡುತಿದ್ದು. ದೇವಗಿರಿಯ ಯಾದವರ ಶರಣಾಗತಿಯಿಂದ ಉತ್ತೇಜಿತನಾದ ಸುಲ್ತಾನನು ಕಾಕತಿಯ ದೊರೆಯನ್ನು ಸೋಲಿಸಲು ೧೩೦೯ ರಲ್ಲಿ ಮಲ್ಲಿಕ್ ಕಾಫೂರ್‌ನ ನೇತೃತ್ವದಲ್ಲಿ ಸೈನ್ಯ ಕಳಿಹಿಸಿದ. ಸೈನ್ಯವು ತೆಲಂಗಾಣ ಪ್ರದೇಶ ವಶಪಡಿಸಿಕೊಂಡು ರಾಜಧಾನಿಯನ್ನು ಮುತ್ತಿಗೆ ಹಾಕಿತು. ಇದರಿಂದ ೧೩೧೦ ರಲ್ಲಿ ಪ್ರತಾಪರುದ್ರನು ಅವರ ಜೊತೆ ಶಾಂತಿಯನ್ನು ಸಂಧಾನವನ್ನು ನಡೆಸಿದ. ಅದರಂತೆ ದೆಹಲಿ ಸುಲ್ತಾನರ ಸಾರ್ವಭೌತ್ವವನ್ನು ಒಪ್ಪಿಕೊಂಡಿದ್ದುದಲ್ಲದೆ ಮಲ್ಲಿಕ್ ಕಾಫೂರನಗೆ ಅಪಾರ ಪ್ರಮಾಣದ ಆಭರಣ ನಾಣ್ಯಗಳು, ಆನೆಗಳು ಮತ್ತು ಕುದುರೆಗಳನ್ನು ಒಪ್ಪಿಸಿದನು."[೩]

### ೩) ದ್ವಾರಸಮುದ್ರ ಮೇಲೆ ದಾಳಿ :

ಅಲ್ಲಾವುದ್ದೀನ ದಕ್ಷಿಣದ ತುತ್ತತುದಿಯ ರಾಜ್ಯಗಳನ್ನು ತನ್ನ ಅಧಿನಕ್ಕೆ ತೆಗೆದುಕೊಳ್ಳಲು ತೀರ್ಮಾನಿಸಿ. ಕ್ರಿ.ಶ ೧೩೧೧ ರಲ್ಲಿ ಮಲ್ಲಿಕ್ ಕಾಫೂರ್‌ನ ನೇತೃತ್ವದಲ್ಲಿ ಸೈನ್ಯ ಕಳುಹಿಸಿ ಜೊತೆಗೆ ದೇವಗಿರಿ ಹಾಗೂ ವಾರಂಗಲ್ ಅರಸರ ಸಹಾಯ ಪಡೆದು ದ್ವಾರಸಮುದ್ರದ ಮೇಲೆ ದಾಳಿ ಹೂಡಿದರು. ಅಲ್ಲಿ ಹೊಯ್ಸಳರ ರಾಜ ಮೂರನೇ ಬಲ್ಲಾಳನು ಆಳುತ್ತಿದ್ದನು. ರಾಜಧಾನಿಯ ಮೇಲೆ ದಾಳಿಮಾಡಿ ಅಪಾರ ಪ್ರಮಾಣದ ಕೊಳ್ಳೆ ಹೊಡಿಲಾಯಿತು. ವೀರ ಬಲ್ಲಾಳ ಶರಣಾಗತನಾಗಿ ಬೊಕ್ಕಸದಲ್ಲಿದ್ದ ಸಂಪತ್ತು ಕಾಫೂರ್‌ನಿಗೆ ಒಪ್ಪಿಸಿದ ದೆಹಲಿ ಸೈನ್ಯ ದೇವಾಲಯಗಳಿಂದ ಬಾರಿ ಪ್ರಮಾಣದ ಚಿನ್ನ ಆಭರಣಗಳನ್ನು ಮತ್ತು ಮುತ್ತು ರತ್ನಗಳನ್ನು ಕೊಳ್ಳೆ ಹೊಡೆದವು. ಇದರಿಂದಾಗಿ ಅನೇಕ ದೇವಾಲಯಗಳ ಧ್ವಂಸ ಗಳಿಸಿದರು. ಹೊಯ್ಸಳರು ಸಹ ದೆಹಲಿ ಸುಲ್ತಾನರ ಸಾಮಂತರಾದರು.

## ೪) ಪಾಂಡ್ಯರ ರಾಜ್ಯದ ಮೇಲೆ ದಾಳಿ :

ಮಲ್ಲಿಕ್ ಕಾಫೂರ್‌ನು ದ್ವಾರಸಮುದ್ರದಿಂದ ತನ್ನ ಗಮನ ಪಾಂಡ್ಯ ರಾಜ್ಯದ ಕಡೆಗೆ ಹರಿಸಿದ. ಪಾಂಡಯ ರಾಜ್ಯ ಕುಲಶೇಖರನ ಮರಣದ ನಂತರ ಸಿಂಹಾಸನಕ್ಕಾಗಿ ಆಂತರಿಕ ಕಲಹಳುಂಟಾದವು. ಮಲ್ಲಿಕ್ ಕಾಫೂರ್‌ನು ಪಾಂಡಯದ ರಾಜ್ಯದ ಮೇಲೆ ದಾಳಿ ಮಾಡಿ ರಾಜಧಾನಿ ಮಧುರೈಯನ್ನು ಸೂರೆಮಾಡಿ ನಗರವನ್ನು ವಶಪಡಿಸಿಕೊಂಡನು. ಅಲ್ಲಾವುದ್ದೀನನ ದಕ್ಷಿಣದ ದಂಡೆಯಾತ್ರೆಗಳು ಶಾಶ್ವತವು ಮತ್ತು ಪೂರ್ಣವಾಗಿರಲಿಲ್ಲ. ಆದರೆ ಇವನ ದಂಡಯಾತ್ರೆಗಳಿಂದ ದಕ್ಷಿಣದ ರಾಜ್ಯಗಳು ಅವನತಿ ಕಂಡವು. ಹಾಗೂ ಮುಸ್ಲಿಂರು ಮುಂದೆ ದಕ್ಷಿಣಕ್ಕೆ ಒಂದು ರಾಜ್ಯ ವಿಸ್ತರಿಸಲು ಅನುವು ಮಾಡಿಕೊಟ್ಟಿತು. ೧೩ನೇ ಶತಮಾನದ ಕೊನೆಯ ವೇಳೆಗೆ ಉತ್ತರ ಭಾರತದಲ್ಲಿ ಪ್ರಬಲರಾಗಿದ್ದ ದೆಹಲಿ ಸುಲ್ತಾನರು ದಕ್ಷಿಣ ರಾಜ್ಯಗಳ ಐಶ್ವರ್ಯದಿಂದ ಆಕರ್ಷಿತರಾದರು. ಅಲ್ಲಾವುದ್ದೀನ ಖಿಲ್ಜಿಯ ದಂಡಯಾತ್ರೆಗಳು ದಕ್ಷಿಣದ ರಾಜಕೀಯ ಸ್ಥಿತಿಯನ್ನು ಅಲುಗಾಡಿಸಿತು. ಇವನ ಸೇನಾನಾಯಕ ಮಲ್ಲಿಕ್ ಕಾಫುರನು ದಖ್ಖನ ಮೇಲೆ ನಿರಂತರ ದಾಳಿಗಳನ್ನು ಕೈಗೊಂಡರು ಇವೆಲ್ಲವೂ ಸಂಪತ್ತನ್ನು ಮಹಾದಾಸೆಯನ್ನು ಹೊಂದಿದ್ದವು. ಮಂದೆ ಸುಲ್ತಾನನಾದ ಮಹಮದ್ ಬಿನ್ ತುಘಲಕ್‌ನು ಸಮಗ್ರ ಭಾರತವನ್ನು ವಶಪಡಿಸಿಕೊಂಡ. ದಕ್ಷಿಣದಲ್ಲಿ ವ್ಯವಸ್ಥಿತವಾದ ಆಡಳಿತವನ್ನು ಜಾರಿಗೆ ತಂದನು. ಸಾಮ್ರಾಜ್ಯದ ವಿಶ್ರಾಂತಿ. ವ್ಯಕ್ತಿಗತ ಕೇಂದ್ರೀಯ ಅಧಿಕಾರ ವ್ಯವಸ್ಥೆ. ಸುಲ್ತಾನನ ವಿವೇಚನಾ ರಹಿತ ಆಡಳಿತ ದಬ್ಬಾಳಿಕೆಯಿಂದ ಸುಲ್ತಾನನ ಸಾಮ್ರಾಜ್ಯದಲ್ಲಿ ಅಶಾಂತಿ ಉಂಟಾಗಿ ಇವನ ವಿರುದ್ಧ ದಕ್ಷಿಣದಲ್ಲಿ ಅನೇಕ ದಂಗೆಗಳು ನಡೆದವು.

"ಸುಲ್ತಾನನ ಸೋದರಳಿಯನಾದ ಬಹಾ-ಉದ್-ದೀನ್ ಗುರುಷಾಸ್ಪನು ಗುಲಬರ್ಗಾದ ಸುರುಪುರ ತಾಲೂಕಿನ ಸಗರ ನಾಡಿನಲ್ಲಿ ರಾಜ್ಯಪಾಲನಾಗಿ ಆಳ್ವಿಕೆ ಮಾಡುತ್ತಿದ್ದನು. ಇವನು ೧೩೨೬-೨೭ ರಲ್ಲಿ ದೆಹಲಿಯ ತುಘಲಕ್ ಸುಲ್ತಾನನ ಅಧಿಕಾರದ ವಿರುದ್ಧ ಬಂಡೆದ್ದವರಲ್ಲಿ ಈತನೆ ಪ್ರಮುಖನಾದವನು"[೪] ಇವನು ತನ್ನ ಪ್ರಬಲವಾದ ಸೈನ್ಯ ಶಕ್ತಿಯೊಂದಿಗೆ ಸಣ್ಣ ಪುಟ್ಟ ಪ್ರಾಂತಗಳನ್ನು ಒಂದಾದ ಮೇಲೆ ಒಂದರಂತೆ ತನ್ನ ವಶಕ್ಕೆ ತೆಗೆದುಕೊಂಡ. ದೆಹಲಿ ಸುಲ್ತಾನನಿಗೆ ಆತಂಕವನ್ನುಂಟು ಮಾಡಿದ್ದನು. ಸಗರನಾಡನ್ನು ರಾಜಧಾನಿಯನ್ನಾಗಿಸಿಕೊಂಡು ಆಳ್ವಿಕೆ ಮಾಡುತ್ತಿದ್ದು ತಾನೇ ಸ್ವಾತಂತ್ರ್ಯವನ್ನು ಘೋಷಿಸಿಕೊಂಡನು. ಮಹಮದ್ ಬಿನ್ ತುಘಲಕನು ಇತನಗೆ ಯಾವುದೇ ರೀತಿಯ ರಾಜಕೀಯ ಸ್ಥಾನಮಾನವನ್ನು ನೀಡದಿದ್ದುದು ಈತನ ಅತೃಪ್ತಿಗೆ ಕಾರಣವೆಂದು ಹೇಳಲಾಗುತ್ತದೆ. ಈತನು ತನ್ನ ರಾಜತಂತ್ರದ ಮೂಲಕ ಕಂಪಿಲಿಯ ಕಂಪಿಲಿರಾಯನೊಡನೆ ಸ್ನೇಹ-ಸಹಕಾರವನ್ನು ಬೆಳೆಸಿಕೊಂಡಿದ್ದನು.

ಬಹಾ-ಉದ್-ದೀನ್‌ನ ಸಂಚನ್ನು ಮೊದಲೆ ಅರಿತುಕೊಂಡ ತುಘಲಕನು ಗುಜುರಾತಿನ ರಾಜ್ಯಪಾಲನಾಗಿದ್ದ ಮಲ್ಲಿಕ್ ಜಾದಾ ಅಹಮದ್‌ನಿಗೆ ಈತನನ್ನು ಹತ್ತಿಕ್ಕಲು ಕಳುಹಿಸಿದನು. ಗೋದಾವರಿ ನದಿಯ ತೀರದಲ್ಲಿ ಮಲ್ಲಿಕ್ ಅಹಮದ್ ಪಡೆಗೆ ಮತ್ತು ಬಹಾ-ಉದ್-ದೀನ್‌ನ ಸೈನ್ಯಕ್ಕೆ ಭಾರಿ

ಪ್ರಮಾಣದ ನಡೆಯಿತು. ಅಪಾಯಕಾರಿ ಪರಿಸ್ಥಿತಿಯನ್ನು ಅರಿತು ಬಹಾ-ಉದ್-ದೀನ್ ಯುದ್ಧ ಭೂಮಿಯಿಂದ ತಪ್ಪಿಸಿಕೊಂಡು ಕಂಪಿಲಿಯ ಕಂಪಿಲಿಯರಾಯನಲ್ಲಿ ರಕ್ಷಣೆ ಪಡೆದನು. ಕಂಪಿಲಿಯ ರಾಜ್ಯವು ಈಗಿನ ರಾಯಚೂರು, ಧಾರವಾಡ, ಬಳ್ಳಾರಿ, ಜಿಲ್ಲೆಗಳಿಂದ ಕೂಡಿತ್ತು. ಕಂಪಿಲಿರಾಯನ ಮಗ ಕುಮಾರರಾಯನು ಸ್ವಾತಂತ್ರವಾಗಿದು. ಬಹು-ಉದ್-ದೀನ್‌ಗೆ ಆಶ್ರಯ ಕೈಗೊಳ್ಳಲು ಮಹಮ್ಮದ ಬಿನ್ ತುಘಲಕ ಸ್ವತಃ ಭಾರಿ ಸೈನ್ಯದೊಂದಿಗೆ ಬಂದನು. ಸುಲ್ತಾನನ ಸೈನ್ಯವು ಕಂಪಿಲಿಯನ್ನು ವಶಪಡಿಸಿಕೊಂಡು ಹೊಯ್ಸಳ ರಾಜ ಮೂರನೇ ಬಲ್ಲಾಳನನ್ನು ಸೋಲಿಸಿ ಗುರುಷಾಸ್ಪನನ್ನು ಶರಣಾಗುವಂತೆ ಮಾಡಿತು. ಸೆರೆಯಾದ ಗುರುಷಾಸ್ಪನನ್ನು ದೆಹಲಿಗೆ ಕರೆತಂದು ಅತ್ಯಂತ ಹೀನಾಯವಾಗಿ ಹಿಂಸಿಸಿ ಕೊಲ್ಲಲಾಯಿತು. ಆದರೆ ಘಟನೆಯ ನಂತರವು ದಕ್ಷಿಣದಲ್ಲಿ ಅನೇಕ ದಂಗೆಗಳು ನಡೆದವು. ದಖ್ಖನಿನಲ್ಲಿ ತುಘಲಕನಗೆ ವಿರೋಧ ವ್ಯಕ್ತಪಡಿಸಿದ ಇತರರೆಂದರೆ ಕಂಪಲಿಯ ಕಂಪಲಿರಾಯ ವಾರಂಗಲನ ಪ್ರತಾಪರುದ್ರ ಹಾಗೂ ಮಲಬಾರನ ವೀರಪಾಂಡ್ಯ. ಈ ಮೂರು ಪ್ರಬಲ ಅರಸರು ತುಘಲಕನ ಆರಂಭದ ದಿನಗಳಿಂದಲೆ ದಖ್ಖನಿನ ಭಾಗದಲ್ಲಿ ತೀವ್ರ ವಿರೋಧವನ್ನು ವ್ಯಕ್ತಪಡಿಸಿದರು. ಆದರಿಂದ ಆತನು ತನ್ನ ರಾಜಧಾನಿಯನ್ನು ದೆಹಲಿಯಿಂದ ದೌಲತಾಬಾದಿಗೆ ವರ್ಗಾಯಿಸಿದನು. ಆದರೆ ಉತ್ತರದಲ್ಲಿ ಅಸ್ಥಿರತೆ ಉಂಟಾದ ಕಾರಣ ರಾಜಧಾನಿಯನ್ನು ಪುನಃ ದೌಲತಾಬಾದಿನಿಂದ ದೆಹಲಿಗೆ ಸ್ಥಳಾಂತರಿಸಿದನು. ೧೩೩೫ ರಲ್ಲಿ ಮಲಬಾರ ತೀರದಲ್ಲಿ ಜಿಲಾಲುದ್ದೀನ್ ಹಸನ್ ಷಾನು ಸ್ವತಂತ್ರನೆಂದು ಘೋಷಿಸಿಕೊಂಡ. "ಇದಾದ ನಂತರ ಅನೇಕ ಹಿಂದೂ ದೊರೆಗಳು ಮಹಮ್ಮದಿಯರ ವಿರುದ್ದ ರಾಷ್ಟ್ರೀಯ ಚಳುವಳಿ ಪ್ರಾರಂಭಿಸಿ ಸ್ವಾತಂತ್ರ ಪಡೆದುಕೊಂಡರು. ೧೮೦ ಎಪ್ರಿಲ್ ೧೩೩೬ ರಲ್ಲಿ ಆನೆಗುಂದಿಯಲ್ಲಿ ಒಂದನೆ ಹರಿಹರನು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದನು."[೫]

೧೩೪೪ ರಲ್ಲಿ ಇಮ್ಮಡಿ ಪ್ರತಾಪರುದ್ರನ ಮಗನಾದ ಕಪಯನಾಯಕನು ಹೊಯ್ಸಳರ ನಾಲ್ಕನೆ ಬಲ್ಲಾಳನ ಸಹಾಯದಿಂದ ದೆಹಲಿ ಸುಲ್ತಾನನ ವಿರುದ್ಧ ಒಂದು ಗುಂಪನ್ನು ಕಟ್ಟಿದನು. ವಾರಂಗಲ್ ರಾಜ್ಯ ದೆಹಲಿ ಸಾರ್ವಭೌಮತ್ವವನ್ನು ಕಿತ್ತೊಗೆಯಿತು. ದೆಹಲಿ ಸೈನ್ಯದಿಂದ ಧ್ವಂಸ ಮಾಡಲ್ಪಟಿದ್ದ ದ್ವಾರಸಮುದ್ರವು ಸಹ ಚೇತರಿಸಿಕೊಂಡಿತು. ಸಣ್ಣ ರಾಜ್ಯವಾದ ಕಂಪಿಲಿಯು ಸಹ ಮುಸ್ಲಿಂ ಆಡಳಿತದಿಂದ ಸ್ವಾತಂತ್ರವಾಯಿತು. ಪೂರ್ವ ಕರಾವಳಿ ಸಂಪೂರ್ಣವಾಗಿ ದೆಹಲಿ ಸುಲ್ತಾನರಿಂದ ವಿಮೋಚನೆಗೊಳಪಟ್ಟಿತು. ಅದರೆ ಇವೆಲ್ಲವುಗಳಿಗಿಂತ ಅತಿ ಮುಖ್ಯವಾದ ಎರಡು ಬದಲಾವಣೆಗಳು ದಕ್ಷಿಣ ಭಾರತದಲ್ಲಿ ಕಂಡು ಬಂದವು. ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಎರಡನೆಯದಾಗಿ ಬಹಮನಿ ರಾಜ್ಯದ ಸ್ಥಾಪನೆ.

### ೨.೪ ಬಹಮನಿ ಸಮ್ರಾಜ್ಯದ ಸ್ಥಾಪನೆ :

"ಕ್ರಿ.ಶ ೧೩೪೫ ರಲ್ಲಿ ಮಹಮದ್ ಬಿನ್ ತುಘಲಕನು ಗುಜುರಾತಿನ ದಂಗೆಯನ್ನು ಅಡಗಿಸಲು ಬ್ರೋಚ್‌ಗೆ ಬಂದನು. ದೌಲತಾಬಾದಿನ ಅಮೀರರಿಗೆ ಸೈನ್ಯವನ್ನು ಸಹಾಯಕ್ಕಾಗಿ ಕಳುಹಿಸಿಬೇಕೆಂದು ಆದೇಶಿಸಿದನು. ಆದರೆ ಅಲ್ಲಿಯ ಅಮೀರರು ಪ್ರಾಂತಾಧಿಕಾರಿಯಾದ ಅಲೀಮುಲ್ ಮುಲ್ಕನನ್ನು ಸೆರೆಯಲ್ಲಿಟ್ಟು ತಮ್ಮಲ್ಲಿ ಹಿರಿನಾಗಿದ್ದ ಮಲ್ಲಿಕ್ ಇಸ್ಮಾಯಿಲ್ ಷಾಹನನ್ನು ದಖ್ಖನ್ನಿನ ಸುಲ್ತಾನನೆಂದು

ಆಯ್ಕೆ ಮಾಡಿಕೊಂಡರು. ಆತ ಈ ಒಕ್ಕೂಟದಲ್ಲಿ ಅತ್ಯಂತ ಬಲಶಾಲಿಯೆನಸಿದ್ದ ಹಸನ್‌ನೆಂಬುವವನಿಗೆ ನಾಯಕನಾಗಿ ನೇಮಿಸಿದ. ಅವನಿಗೆ ಜಫರ್‌ಖಾನ್ ಮತ್ತು ಅಮೀರ್-ಉಲ್-ಉಮರಾ ಎಂಬ ಬಿರುದನ್ನು ನೀಡಿದನು"[೬] ಸುಲ್ತಾನನ ಮಹಮದ್ ಬಿನ್ ತುಘಲಕನ ಸೈನ್ಯವು ಗುಲಬರ್ಗಾದ ಮೇಲೆ ದಾಳಿ ಮಾಡಿ ಗುಲಬರ್ಗಾವನು ವಶಪಡಿಸಿಕೊಂಡಿತು. ಆನಂತರ ಕಲ್ಯಾಣ ಮತ್ತು ಸಗರ ನಗರಗಳು ಸುಲ್ತಾನನ ವಶವಾದವು. ಇಸ್ಮಾಯಿಲ್‌ಷಾ ಗುಲಬರ್ಗಾವನ್ನು ವಶಪಡಿಸಿಕೊಳ್ಳಲು ಜಫರ್‌ಖಾನನ್ನು ಕಳುಹಿಸಿದ. ಇವನು ಗುಲಬರ್ಗಾದಲ್ಲಿ ದೆಹಲಿ ಸುಲ್ತಾನನ ಸೇನೆಯನ್ನು ಸೋಲಿಸಿ ಆ ಪ್ರದೇಶಗಳನ್ನು ವಶಪಡಿಸಿಕೊಂಡ ನಂತರ ಜಫರ್‌ಖಾನನು ವಿಜಯಿಯಾಗಿ ದೌಲತಾಬಾದ್‌ಗೆ ಹಿಂದಿರುಗಿದನು. ಈ ಬೆಳವಣಿಗೆಗಳು ಸುಲ್ತಾನನಲ್ಲಿ ಆತಂಕವನ್ನು ಮೂಡಿಸಿದವು. ಇವನು ದೇವಗಿರಿಯನು ಗೆಲ್ಲಲು ನಿರ್ಧರಿಸಿ ಮುತ್ತಿಗೆ ಹಾಕಿದ. ಈ ಮಧ್ಯ ಜಫರ್ ಖಾನ್ ಗುಲಬರ್ಗಾಕ್ಕೆ ಹಿಂದುರುಗಿದ. ಸುಲ್ತಾನ ಮಹಮದ್ ಬಿನ್ ತುಘಲಕನು ದೇವಗಿರಿಯನ್ನು ಮುತ್ತಿದಾಗ ಇಸ್ಮಾಯಿಲ್‌ಷಾನು ಕೋಟೆಯ ಒಳಗೆ ಅವಿತುಕೊಂಡನು. ಅವನ ಸ್ಥಿತಿ ಚಿಂತಾಜನಕವಾಯಿತು. ಗುಜುರಾತನ ಬಂಡಾಯ ವಿಷಮ ಸ್ಥಿತಿಗೇರಿದಾಗ ಸುಲ್ತಾನ ಮಹಮದ್ ಬಿನ್ ತುಘಲಕನು ಅತ್ತ ತೆರಳಬೇಕಾಯಿತು. ಆದರೆ ತನ್ನ ಸೇನಾಧಿಕಾರಿಯನ್ನು ದೇವಗಿರಿಯ ಕೋಟೆಯ ರಕ್ಷಣೆಗೆ ನೇಮಿಸಿದ. ಈ ಅವಕಾಶವನ್ನು ಸದುಪಯೋಗಪಡಿಸಿಕೊಂಡ ಜಫರ್‌ಖಾನ ದೌಲತಾಬಾದಿಗೆ ಧಾವಿಸಿ ಬಂದನದಲ್ಲಿದ್ದ ಇಸ್ಮಾಯಿಲ್‌ಷಾನನ್ನು ಬಿಡಿಸಿಕೊಂಡು, ನಂತರ ತುಘಲಕನ ಸೇನಾನಿಯಾಗಿದ್ದ ಸರ್ತೇಜನನ್ನು ಕೊಂದು ಹಾಕಿದನು. ಈತನ ಶಕ್ತಿ ಸಾಮರ್ಥ್ಯವನ್ನು ತನ್ನ ದುರ್ಬಲ್ಯಗಳನ್ನು ಕಂಡುಕೊಂಡ ಇಸ್ಮಾಯಿಲ್ ಸುಲ್ತಾನ ಪದವಿಯನ್ನು ಹಸನ್‌ನಿಗೆ ಬಿಟ್ಟುಕೊಟ್ಟನು. ಹಾಗೆಯೇ ಅಮೀರರೂ ಪ್ರಜೆಗಳೂ ಸಹ ಜಫರ್‌ಖಾನನನ್ನು ತಮ್ಮ ಸುಲ್ತಾನನ್ನಾಗಿ ಆಯ್ಕೆಮಾಡಿದರು. "ಜಫರ್‌ಖಾನನು ಕ್ರಿ.ಶ ೧೩೪೭ ಆಗಸ್ಟ್ ೩ ಶುಕ್ರವಾರ ರಂದು ಸಿಕಂದರ್ ಇ-ಸಾನಿ ಅಬ್ದುಲ್ ಮುಜಫ್ಫರ್ ಸುಲ್ತಾನ ಅಲ್ಲಾವುದ್ದೀನ್ ಹಸನ್ ಬಹಮನ್‌ಷಾ ಅಲ್-ವಾಲಿಯಲ್ ಬಹಮನಿ ಎಂಬ ಬಿರುದಿನೊಂದಿಗೆ ಸಿಂಹಾಸನವನ್ನೇರಿ ಬಹಮನಿ ರಾಜ್ಯ ಸ್ಥಾಪಿಸಿದನು[೭]" ಗುಲಬರ್ಗಾ ಅಥವಾ ಕಲ್ಬುರ್ಗಿ ಈ ರಾಜ್ಯದ ರಾಜಧಾನಿಯಾಯಿತು.

### ೨.೫ ಬಹಮನಿ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಐತಿಹ್ಯಗಳು :

೧) ಬಹಮನಿ ರಾಜ್ಯದ ಸ್ಥಾಪಕನಾದ ಅಲ್ಲಾವುದ್ದೀನ ಹಸನ್ ಬಹಮನಷಾನ ಮೂಲದ ಕುರಿತು ಸ್ಪಷ್ಟವಾದ ಮಾಹಿತಿಗಳು ದೊರೆತಿಲ್ಲ. ಮುಸ್ಲಿಂ ವಿದ್ವಾಂಸನಾದ ಫೆರಿಸ್ತಾನ ಹೇಳಿಕೆಯಂತೆ "ಹಸನ್ ದೆಹಲಿಯವನಾಗಿದ್ದನು ಈತ ಒಬ್ಬ ಗಂಗೂ ಎಂಬ ಬ್ರಾಹ್ಮಣನ ಸೇವೆಯಲ್ಲಿದ್ದಾಗ ಅವನಿಗೆ ಒಂದು ಚಿನ್ನದ ನಾಣ್ಯಗಳಿದ್ದ ಬಿಂದಿಗೆಯೊಂದು ಸಿಕ್ಕಿತು. ಆತ ಅದನ್ನು ತನ್ನ ಯಜಮಾನನ ಬಳಿ ಕೊಡೊಯ್ದನು. ಇವನ ಈ ನಿಷ್ಠೆಯನ್ನು ಬ್ರಾಹ್ಮಣನು ದೆಹಲಿ ಸುಲ್ತಾನ ಗಮನಕ್ಕೆ ತಂದಾಗ ಸುಲ್ತಾನ ಅವನನ್ನು ನೂರು ಕುದುರೆಗಳ ಸರದಾರನನ್ನಾಗಿ ನೇಮಿಸಿದನು. ಅದೇ ಸಮಯದಲ್ಲಿ ಜೋತಿಷ್ಯ ಸಹ ಆಗಿದ್ದ ಆ ಬ್ರಾಹ್ಮಣ ಹಸನ್ ಮುಂದೆ ಬಹಳ ಪ್ರಖ್ಯಾತ ವ್ಯಕ್ತಿಯಾಗುತ್ತಾನೆಂದು ಭವಿಷ್ಯ ನುಡಿದಿದ್ದನು.

ಅದರಂತೆ ಮುಂದೆ ಸುಲ್ತಾನನಾದ ಹಸನ್ ಆ ಬ್ರಾಹ್ಮಣನ ನೆನಪಿಗಾಗಿ ತನ್ನ ಮನೆತನವನ್ನು ಬಹಮನಿ ಎಂದು ಕರೆದುಕೊಂಡನು"[೮]. "ಇದೆ ಹೇಳಿಕೆಯು ಇತರ ಮುಸ್ಲಿಂ ಇತಿಹಾಸಕಾರರಾದ ತಬತಬಮತ್ತು ನಿಜಾಂಉದ್‌ದೀನ್ ಅಹ್ಮದ್‌ರ ಗ್ರಂಥದಲ್ಲಿ ತಿಳಿದುಬರುವುದಿಲ್ಲ"[೯]

೨) ಇನ್ನೊಂದು ಮೂಲದ ಪ್ರಕಾರ ಪರ್ಷಿಯಾ ದೇಶದಲ್ಲಿ ಬಹಮ್‌ನ್‌ಷಾ ಎಂಬ ಸುಲ್ತಾನನಿದ್ದನೆಂದೂ. ಆತನ ನೆನಪಿನಲ್ಲಿ ಹಸನ್ ತನ್ನ ರಾಜ್ಯವನ್ನು ಬಹಮನಿ ಎಂದು ಹೆಸರಿಸಿದನೆನ್ನಲಾಗಿದೆ. ಅಂತಿಮವಾಗಿ ಸ್ಪಷ್ಟ ಮತ್ತು ಸತ್ಯಕ್ಕೆ ಹತ್ತಿರವೆಂಬ ಸಂಗತಿಯ ಪ್ರಕಾರ ಹಸನ್‌ನ 'ಸಂತತಿಯ ಮೂಲ ಪುರುಷನಾದ ದೆಹಲಿಯ ಸುಲ್ತಾನ ಅಲ್ಲಾವುದ್ದೀನ್ ನೆನಪಿನಲ್ಲಿ ಅಲ್ಲಾವುದ್ದೀನ್ ಎಂಬ ಬಿರುದನ್ನು ಹಸನ್ ತನ್ನ ಹೆಸರಿಗೆ ಸೇರಿಸಿಕೊಂಡು ಬಹಮನಿ ರಾಜ್ಯ ಸಂಸ್ಥಾಪಿಸಿದನೆನ್ನಲಾಗಿದೆ.

## ಅಡಿಟಿಪ್ಪಣಿಗಳು

೧. ಪಾಟೀಲ ಎಂ.ಬಿ (ಸಂ) : ಗುಲಬರ್ಗಾ ಜಿಲ್ಲೆ ಗ್ಯಾಸಿಟಿಯರ್, ೧೯೯೭, ಪುಟ-೦೧

೨. ನೀಲಕಂಠ ಶಾಸ್ತ್ರಿ ಕೆ.ಎ : ಎ ಹಿಸ್ಟರಿ ಆಫ್ ಸೌತ್ ಇಂಡಿಯಾ, ೧೯೭೬ ಪುಟ-೨೨೮

೩. ಅದೇ : ಪುಟ- ೨೨೮

೪. ಪಾಟೀಲ ಎಂ.ಬಿ (ಸಂ) : ಗುಲಬರ್ಗಾ ಜಿಲ್ಲೆ ಗ್ಯಾಸಿಟಿಯರ್, ೧೯೯೭ ಪುಟ-೬೦

೫. ನೀಲಕಂಠ ಶಾಸ್ತ್ರಿ ಕೆ.ಎ : ಎ ಹಿಸ್ಟರಿ ಆಫ್ ಸೌತ್ ಇಂಡಿಯಾ, ೧೯೭೬ ಪುಟ-೨೩೯

೬. ಶಿವರುದ್ರ ಸ್ವಾಮಿ ಎಸ್.ಎನ್ : ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ, ೨೦೦೬ ಪುಟ-೨೯೪

೭. ಸದಾಶಿವ ಕೆ : ಮಧ್ಯಯುಗೀನ ಭಾರತದ ಇತಿಹಾಸ, ೨೦೦೪, ಪುಟ-೫೧೦

೮. ಬಹಮನಿ ಕಿಂಗ್‌ಡಮ್.ಕಮ್ : ೨೦೦೯ ಜುಲೈ ೩೦ ಪುಟ-೧೭

೯. ಕನ್ನಡ ಮತ್ತು ಸಂಸ್ಕೃತಿ ಇಲಾಖೆ :ಕರ್ನಾಟಕ ಪರಪಂರೆಗಳು ಸಂಪುಟ-೨, ಬೆಂಗಳೂರು ೨೦೦೬ ಪುಟ-೫೯

# ಅಧ್ಯಾಯ–೩
# ಬಹುಮನಿ ಸಾಮ್ರಾಜ್ಯದ ಸಂಕ್ಷಿಪ್ತ ಇತಿಹಾಸ

೧೩೪೭ ರಲ್ಲಿ ಸ್ಥಾಪನೆಯಾದ ಬಹಮನಿ ರಾಜ್ಯವು ವಿಜಯನಗರ ಸಾಮ್ರಾಜ್ಯದಂತೆ ಕರ್ನಾಟಕ ಇತಿಹಾಸದಲ್ಲಿ ಹೊಸ ಅಧ್ಯಾಯಕ್ಕೆ ಕಾರಣರಾದರು. ಇವರು ವಿಭಿನ್ನ ಧರ್ಮ ಮತ್ತು ಸಂಸ್ಕೃತಿಯನ್ನು ದಖ್ಖನಿನಲ್ಲಿ ಪರಿಚಯಿಸಿದರು.

ಪರ್ಷಿಯಾದ ಕ್ರಿಯಾಶೀಲ ಸಾಹಸಿ 'ಹಸನ್‌ಗಂಗೂ' ಎಂಬುವವನು ಬಹಮನಿ ರಾಜ್ಯವನ್ನು ಕ್ರಿ.ಶ ೧೩೪೭ ರಲ್ಲಿ ಸ್ಥಾಪಿಸಿದ. ಇವನು 'ಬಹಮನ್' ಎಂಬ ಬಿರುದನ್ನು ಧರಿಸಿದ್ದರಿಂದ ಇವನ ರಾಜ್ಯ 'ಬಹಮನಿ' ಎಂದು ಹೆಸರಿಸಲಾಯಿತು. ಹತ್ತು ವರ್ಷಗಳ ಹಿಂದೆ ೧೩೩೬ ರಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗಿತ್ತು. ಬಹಮನಿಯ ಇತಿಹಾಸವು ವಿಜಯನಗರ ಸಾಮ್ರಾಜ್ಯದೊಂದಿಗೆ ನಡೆಸಿದ ನಿರಂತರ ಭೀಕರ ಯುದ್ಧಗಳ ಸರಮಾಲೆಯ ಇತಿಹಾಸವೇ ಆಗಿದೆ. ಆತಂರಿಕವಾಗಿ ಬಹಮನಿ ರಾಜ್ಯದ ಇತಿಹಾಸ ಅಧಿಕಾರಕ್ಕಗಿ ನಡೆಸಿದ ಹೋರಾಟ, ಕೊಲೆಗಳಿಂದ ಕೂಡಿದ್ದರೂ ಇದು ಮೊದಲು ಐವತ್ತು ವರ್ಷಗಳ ಕಾಲ ಅಜೇಯ ರಾಜಕೀಯ ಶಕ್ತಿಯ ವಿಜೃಂಭಿಸಿತು. ದಕ್ಷರಾದ ಇಲ್ಲಿನ ಸುಲ್ತಾನರು ಇತಿಹಾಸ ಪುಟವನ್ನು ಅಲಂಕರಿಸಿದ್ದಾರೆ. ಇಲ್ಲಿಯ ಆಡಳಿತಗಾರಲ್ಲಿ ಮಹಮದ್ ಗವಾನ್ ಪ್ರಮುಖವಾದವನು. ಅವನು ಬಹಮನಿ ಸಾಮ್ರಾಜ್ಯಕ್ಕೆ ಮಹತ್ತರ ಸೇವೆಯನ್ನು ಸಲ್ಲಿಸಿದ. ಬಹಮನಿ ರಾಜ್ಯದ ದಖ್ಖನಿ ಮತ್ತು ಆಫಾಕೀ (ವಿದೇಶಿ)ಯರ ಕಿತ್ತಾಟದಿಂದ ಈ ರಾಜ್ಯದ ಅಂತಸತ್ವವೇ ಉಡುಗಿ ಹೋಯಿತು. ಸುಮಾರು ೧೮೦ ವರ್ಷಗಳ ಕಾಲ ಬಾಳಿದ ಈ ರಾಜ್ಯ ಅಂತ್ಯದಲ್ಲಿ ತನ್ನ ಗೋರ

ಅವಿವೇಕಗಳಿಂದ ನಾಶವಾಯಿತು. ಆದರೂ ಇದರ ಕೊಡುಗೆಗಳು ದೊಡ್ಡವೇ. ಆಡಳಿತದಲ್ಲಿ ಇದು ವಿನೂತನ ಪ್ರಯೋಗಗಳನ್ನು ಮಾಡಿತು. ಕಲೆ ಮತ್ತು ವಾಸ್ತುಶಿಲ್ಪಕ್ಕೆ ಮತ್ತು ಸಂಗೀತಕ್ಕೆ ಪ್ರೋತ್ಸಾಹವನ್ನು ನೀಡಿತು. ಇಸ್ಲಾಮಿ ವಾಸ್ತು ಶೈಲಿ ದಖನ್‌ನಲ್ಲಿ ಪ್ರಾರಂಭವಾಗಿ ಉನ್ನತ ಮಟ್ಟದಲ್ಲಿ ಬೆಳೆಯುವದಕ್ಕೆ ಬಹಮನಿ ಸುಲ್ತಾನರೆ ಕಾರಣ.

"ಬಹಮನಿ ರಾಜಮನೆತನವನ್ನು ದಖ್ಖನನಲ್ಲಿ ಸುಮಾರು ೧೮೦ ವರ್ಷಗಳ ಕಾಲ ಆಳ್ವಿಕೆಯಲ್ಲಿ ೧೮ ಜನ ಸುಲ್ತಾನರು ಆಳ್ವಿಕೆ ಮಾಡಿದರು."[1] ಇವರು ಪ್ರಾರಂಭದಲ್ಲಿ ಕಲ್ಬುರ್ಗಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ಅಲ್ಲಾವುದ್ದೀನ್ ಹಸನ್ ಬಹಮನ್‌ಷಾ ಕಲ್ಬುರ್ಗಿಯನ್ನು 'ಅಹ್‌ಸನಾಬಾದ್' ಎಂದು ಕರೆದನು. ಇದು ಕ್ರಿ.ಶ ೧೩೪೭ ರಿಂದ ೧೪೨೫ ರವರೆಗೆ ಬಹಮನಿಯ ರಾಜಧಾನಿಯಾಗಿತ್ತು. ನಂತರ ಒಂದನೆಯ ಅಹಮ್ಮದಷಾನ ಕಾಲದಲ್ಲಿ ರಾಜಧಾನಿಯನ್ನು ಬೀದರಗೆ ವರ್ಗಾಯಿಸಲಾಯಿತು. ಬೀದರ ಹೆಸರು 'ಅಹಮದಬಾದ ಬೀದರ' ಆ ಮೇಲೆ 'ಮೊಹಮ್ಮದಾಬಾದ ಬೀದರ' ಆಗಿ ಪರಿವರ್ತನೆಗೊಂಡಿತು. ಬಹಮನಿ ಮನೆತನಕ್ಕೆ ಸಂಬಂಧಿಸಿದ ಪ್ರಮುಖ ಆಳ್ವಿಕೆಗಾರರ ಸಂಕ್ಷಿಪ್ತ ಇತಿಹಾಸವನ್ನು ಈ ಕೆಳಗೆ ವಿವರಿಸಲಾಗದೆ.

**ಬಹಮನಿ ಇತಿಹಾಸಕ್ಕೆ ಸಂಬಂಧಿಸಿದ ಆಧಾರಗಳು :**

ಬಹಮನಿ ಸುಲ್ತಾನರ ಇತಿಹಾಸ ರಚನೆಗೆ ಮುಸ್ಲಿಂ ವಿದ್ವಾಂಸರಾದ ಇಸಾಮಿ, ಫರಿಸ್ತಾ ಮತ್ತು ಆಲಿಬಿನ್ ತಬತಬ ಮುಂತಾದವರ ಗ್ರಂಥಗಳು ಪ್ರಮುಖ ಆಧಾರಗಳಾಗಿದೆ. ಇಸಾಮಿಯ ಗ್ರಂಥಗಳಲ್ಲಿ ಮುಖ್ಯವಾದದ್ದು ಫತಾವ್-ಉಸ್-ಸಲಾತಿನ್ ಇಸಾಮಿ ದಖ್ಖನಿನ ಅಲಾ-ಉದ್-ದಿನ್ ಬಹಮನ್‌ಷಾನ ಆಸ್ಥಾನ ಕವಿಯಾಗಿದ್ದನು. ೧೬೧೧ ರಲ್ಲಿ ರಚಿತವಾದ ಫರಿಸ್ತಾನ 'ತಾರೀಖ್-ಏ-ಫರಿಸ್ತಾ' ಭಾರತದಲ್ಲಿ ಮಹಮದೀಯರ ಆಳ್ವಿಕೆಯ ವಸ್ತುಸ್ಥಿತಿಯ ಸತ್ಯಾಂಶವನ್ನು ಒಳಗೊಂಡಿದೆ. ತಬತಬನ 'ಬರ್‌ಹಾನ್-ಏ-ಮಾಸಿರ್' ನಿಜಾಮ್‌ಷಾಹಿಗಳ ಇತಿಹಾಸವನ್ನು ಬಹಮನಿ ಸುಲ್ತಾನರ ಪೀಠಿಕೆಯೊಂದಿಗೆ ವಿವರಿಸುತ್ತದೆ. ೧೫ ನೇ ಶತಮಾನ ಉತ್ತರಾರ್ಧದಲ್ಲಿ ಬೀದರಗೆ ಭೇಟಿ ನೀಡಿದ್ದ ರಷ್ಯಾ ಪ್ರವಾಸಿ ನಿಕೆಟನ್‌ನ ವರದಿಯ ಜೊತೆಗೆ ಅಂದಿನ ನಾಣ್ಯ ಮತ್ತು ಸ್ಮಾರಕಗಳು ಬಹಮನಿ ಸುಲ್ತಾನರ ಇತಿಹಾಸ ತಿಳಿಸಲು ಅನುಕೂಲವಾಗಿದೆ.

**ಅಲ್ಲಾವುದ್ದೀನ್ ಹಸನ್ ಬಹಮನ್‌ಷಾ ೧೩೪೭-೧೩೫೮ :**

ಅಲ್ಲಾವುದ್ದೀನ ಬಹಮನ್‌ಷಾ ಬಹಮನಿ ರಾಜ್ಯ ಸ್ಥಾಪಿಸಿದ ನಂತರ ಹನ್ನೊಂದು ವರ್ಷಗಳ ಕಾಲ ಆಳ್ವಿಕೆ ನಡೆಸಿದ. ತನ್ನ ಆಳ್ವಿಕೆಯ ಹೆಚ್ಚಿನ ಕಾಲವನ್ನು ಯುದ್ಧ ಮತ್ತು ಸಾಮ್ರಾಜ್ಯ ವಿಸ್ತರಣೆಯಲ್ಲಿ ಕಳೆದನು. ಅಲ್ಲಾವುದ್ದೀನ ಸಿಂಹಾಸನ ರೂಢನಾದ ತಕ್ಷಣ ರಾಜ್ಯದ ರಾಜಧಾನಿಯನ್ನು ದೌಲತಾಬಾದ್ ದಿಂದ ಗುಲಬರ್ಗಾಕ್ಕೆ ವರ್ಗಾಯಿಸಿದನು.

"ಅಲ್ಲಾವುದ್ದೀನ ಹಸನ್ ಗುಲಬರ್ಗಾಕ್ಕೆ ರಾಜಧಾನಿಯನ್ನು ವರ್ಗಾಯಿಸಿದಾಗ ಅಲ್ಲಿ ಪೋಚರಡ್ಡಿ ನಾಯಕನಾಗಿದ್ದನು. ಇವನು ಮಹಮದ್ ಬಿನ್ ತುಘಲಕನಗೆ ನಿಷ್ಠಾವಂತನಾಗಿದ್ದ. ಅಲ್ಲಾವುದ್ದೀನ

ಗುಲಬರ್ಗಾಕ್ಕೆ ರಾಜಕೀಯವಾಗಿ ತನ್ನ ರಾಜಧಾನಿಯನ್ನು ಸ್ಥಳಾಂತರಿಸಿದರು. ಆತನ ಆಸ್ಥಾನವು ಸ್ವಲ್ಪ ಕಾಲ ದೌಲತಾಬಾದನಲ್ಲಿ ಮುಂದುವರೆಯಿತು. ನಂತರ ಅಲ್ಲಾವುದ್ದೀನ ತನ್ನ ಸೇನಾಬಲ ಹಾಗೂ ಶಾಂತಿ ಮಾತುಕತೆಗಳ ಮಾರ್ಗವನ್ನು ಬಳಸಿ ಸ್ಥಳಿಯ ನಾಯಕರನ್ನು ಅಧಿಕಾರದಿಂದ ತೆಗೆದುಹಾಕಿದ. ಅಮೀರ ಮತ್ತು ಜಾಗೀರದಾರನ್ನು ತನ್ನ ಅನುಯಾಯಿಗಳಾಗಿಸಿಕೊಂಡು ತುಘಲಕನ ಸೈನಿಕರನ್ನು ಹತ್ತಿಕ್ಕಿದ"[೨] ನಂತರ ತನ್ನ ಸೇನಾಧಿಕಾರಿಗಳನ್ನು ಕಾಂದಾರ್, ಮಾರಂ, ಮಧುರೈ, ಅಕ್ಕಲ್‌ಕೋಟೆ ಮತ್ತು ಕಲ್ಯಾಣಗಳ ಮೇಲೆ ದಂಡಯಾತ್ರೆ ಕೈಗೊಳುವಂತೆ ಮಾಡಿದ. ಹಾಗೂ ಅಲ್ಲಿಯ ನಾಯಕರನ್ನು ಸಹ ತನ್ನ ಸಾರ್ವಭೌಮವನ್ನು ಒಪ್ಪಿಕೊಳ್ಳುವಂತೆ ಮಾಡಿದನು. ಹಲವಾರು ದಂಗೆ ಎದ್ದ ಪಾಳೆಗಾರರನ್ನು ಹತ್ತಿಕ್ಕಿದ. ಹಾಗೂ ಬಿಜಾಪುರವನ್ನು ಆಕ್ರಮಿಸಿಕೊಂಡು ಕೊಲ್ಲಾಪುರ ಮತ್ತು ಕೊಂಕಣ ಬಂದರುಗಳಾದ ದೇಬಾಲ್ ಮತ್ತು ಖಾರ ಪಟ್ಟಣವನ್ನು ಗೆದ್ದು ತನ್ನ ರಾಜ್ಯಕ್ಕೆ ಸೇರಿಸಿ ಕಂಡನು. ಉತ್ತರದಲ್ಲಿ ೧೩೫೧ ರಲ್ಲಿ ಮಹಮದ್ ಬಿನ್ ತುಘಲಕರನು ಮರಣ ಹೊಂದಿದ ನಂತರ ಉತ್ತರಾಧಿಕಾರಿಯಗಿ ಬಂದ ಫಿರೋಜನು ರಾಜ್ಯವನ್ನು ಭದ್ರಪಡಿಸಲು ಯಾವುದೇ ಕ್ರಮ ಕೈಗೊಳ್ಳಲಿಲ್ಲ. ಕಾರಣ ಸೈನ್ಯ ಸಂಘಟಸಿದ ಹಸನ್‌ಗಂಗು ದೆಹಲಿ ಸಾಮ್ರಾಜ್ಯದ ಭಾಗಗಳದ ಕಾಂದಹಾರಿನ ಕೋಟೆ, ಬೀದರ, ಮಳಖೇಡ, ಬೊಂಬಾಯಿ ಪ್ರಾಂತದ ರತ್ನಗಿರಿ ಹಾಗೂ ಗೋವಾ ಪ್ರದೇಶಗಳನ್ನು ಗೆದ್ದುಕೊಂಡನು. ಇದರಿಂದ ಈತನ ಅಧಿಕಾರ ಅವಧಿಯಲ್ಲಿ ಬಹಮನಿ ರಾಜ್ಯವು ಪೂರ್ವದಲ್ಲಿ ಬೊಂಗಿರ್‌ನಿಂದ ಪಶ್ಚಿಮದಲ್ಲಿ ಗೋವಾದವರೆಗೂ ಉತ್ತರದಲ್ಲಿ ಮಾಂಡವಿನಿಂದ ದಕ್ಷಿಣದಲ್ಲಿ ಕೃಷ್ಣಾ ನದಿಯವರೆಗೂ ವಿಸ್ತರಿಸಿತು. ತಾನು ವಿಸ್ತರಿಸಿದ ರಾಜ್ಯವನ್ನು ನಾಲ್ಕು 'ತರಫ್'ಗಳಾಗಿ ವಿಂಗಡಿಸಿದ. ೧) ಗುಲಬರ್ಗಾ ೨) ದೌಲತಾಬಾದ ೩)ಬೀರಾರ್ ೪)ಕಾಂದಹಾರ್ ಇವುಗಳ ಮೇಲೆ 'ತರಫ್‌ದಾರ್' ನೇಮಕ ಮಾಡಿದ. ಈ ರಾಜ್ಯಪಾಲರುಗಳು ಆ ಪ್ರಾಂತ್ಯದ ಆಡಳಿತ ಮಾತ್ರವಲ್ಲದೆ ಯುದ್ಧ ಸಮಯದಲ್ಲಿ ಸುಲ್ತಾನನಿಗೆ ಸೈನ್ಯ ಸಹಾಯ ಮಾಡಬೇಕಿತು. "ಖಲೀಫನ ಮಾನ್ಯತೆಯ ಮೇರಿಗೆ ಸ್ವತಂತ್ರವಾಗಿ ಎರಡನೆ ಅಲೆಗ್ಸಾಂಡರ್ ಎಂದು ನಾಣ್ಯ ಟಂಕಿಸಿದನು"[೩] ಇವನು ದಕ್ಷ ಆಡಳಿತಗಾರ ಹಾಗೂ ಶೂರನಾಗಿದ್ದನಲ್ಲದೆ ಮಸಿದಿ, ಅರಮನೆ ಹಾಗೂ ಸಾರ್ವಜನಿಕ ಕಟ್ಟಡಗಳನ್ನು ನಿರ್ಮಿಸಿದನು. ಧಾರ್ಮಿಕವಾಗಿ ಉದಾರಿಯಾದ ಅವನು ಹಿಂದೂಗಳ ಮೇಲಿನ ಜಜಿಯಾ ತಲೆಗಂದಾಯವನ್ನು ರದ್ದುಗೊಳಿಸಿದನು. ಇಸಾಮಿ ಇವನ ಆಸ್ಥಾನದ ಕವಿಯಾಗಿದ್ದನು. ಅಲ್ಲಾವುದ್ದೀನ್ ಬಹಮನ್‌ಷಾ ಕ್ರಿ.ಶ ೧೩೫೮ ರಂದು ಮೃತನಾದನು. ಇವನು ಸಾಧಿಸಿದ್ದು ಅಪಾರ, ಕಾರ್ಯದಲ್ಲಿ ಶ್ರದ್ಧೆ ಸಮಯಪ್ರಜ್ಞೆ, ಕ್ಷಮಾಗುಣಗಳಿಂದ ಬೃಹತ ರಾಜ್ಯವೊಂದರ ಸ್ಥಾಪಕನಾಗಿದ್ದನಲ್ಲದೆ, ಅದರ ಸಂಘಟನಾಕಾರನೂ ಆದ ಇವನ ಕಾಲದಲ್ಲಿ ಪ್ರಜೆಗಳು ನೆಮ್ಮದಿಯಿಂದ ಬದುಕುತ್ತಿದ್ದರು.

**ಒಂದನೆ ಮಹಮದ್‌ಷಾ ಕ್ರಿಶ ೧೩೫೮-೧೩೭೫ :**

ಹಸನ್ ಬಹಮನಷಾನ ಮರಣದ ನಂತರ ಅವನ ಮಗ ಒಂದನೇ ಮಹಮದ್‌ನು ಬಹಮನಿಯ ಸುಲ್ತಾನನಾದ. ಇವನ ಕಾಲದಲ್ಲಿ ಯುದ್ಧ ಕ್ರಿಯೆಯಲ್ಲಿ ಕ್ರಾಂತಿ ಉಂಟಾಯಿತು. "ಅದೋನಿಯ ೧೩೬೬ ರ ಆಕ್ರಮಣದಲ್ಲಿ ಸಿಡಿಮದ್ದುನ್ನು ಧಾರಳವಾಗಿ ಉಪಯೋಗಿಸಲಾಯಿತು. ಸಿಡಿಮದ್ದನು

ದಕ್ಷಿಣ ಭಾರತದಲ್ಲಿ ಜಾರಿಗೆ ತಂದವರಲ್ಲಿ ಇವನೇ ಮೊದಲಿಗ". ಇದರಿಂದ ಇವನು ರಕ್ಷಣಾ ವಾಸ್ತುವಿನಲ್ಲಿ ಹಲವಾರು ಬದಲಾವಣೆಗಳನ್ನು ತಂದನು. ಕೋಟೆಗಳಲ್ಲಿ ದಪ್ಪವಾದ ಗೋಡೆಗಳ ನಿರ್ಮಾಣ, ವಿವಿಧ ರಕ್ಷಣಾ ವ್ಯವಸ್ಥೆಗಳನ್ನು ಅಳವಡಿಸಿಕೊಂಡನು. ಇವನು ಆಡಳಿತದಲ್ಲಿ ಹಲವಾರು ಸುಧಾರಣೆಗಳನ್ನು ಜಾರಿಗೆ ತಂದು, ಉನ್ನತ ಅಧಿಕಾರದ ಸ್ಥಾನಗಳನ್ನು ಸ್ಥಾಪಿಸಿದನು. ಇವನ ಕಾಲದಲ್ಲಿ ವಾರಂಗಲ್ ಮತ್ತು ವಿಜಯನಗರದ ವಿರುದ್ಧ ಯುದ್ಧ ಹೂಡಿ ವಿಜಯವನ್ನು ಸಾಧಿಸಿದನು. ಇವನು ಸಾಹಿತ್ಯ, ಸಂಗೀತ, ಕಲಾಭಿಮಾನಿಯಾಗಿದ್ದನು. ಈತ ಗುಲಬರ್ಗಾದಲ್ಲಿ ಅತಿ ದೊಡ್ಡ 'ಜಾಮ್ಮಾ ಮಸೀದಿ' (೪೦,೦೦೦ ಚದರ ಅಡಿ) ಯನ್ನು ನಿರ್ಮಿಸಿದನು.

ಸುಲ್ತಾನನು ದಕ್ಷ ಆಡಳಿತನಾಗಿದ್ದು ಆಡಳಿತ ಕ್ಷೇತ್ರದಲ್ಲಿ ಅನೇಕ ಸುಧಾರಣೆಗಳನ್ನು ಜಾರಿಗೆ ತಂದನು. ಇವನ ಸಚಿವ ಸಂಪುಟದಲ್ಲಿ ಎಂಟು ಮಂದಿ ಮಂತ್ರಿಗಳಾಗಿದ್ದರು. ಪ್ರಾಂತಾಡಳಿತವನ್ನು ವಿಕೇಂದ್ರಿಕರಣಗೊಳಿಸಿ ಅಧಿಕಾರಗಳನ್ನು ಹತೋಟಿಯಲ್ಲಿಟ್ಟುಕೊಂಡಿದ್ದನು. ಅಂಗರಕ್ಷಕರನ್ನು ನಾಲ್ಕು ವಿಭಾಗಗಳಾಗಿ ವಿಂಗಡಿಸಿದನು. ಸ್ಥಳೀಯ ಸಂಸ್ಥೆಗಳಿಗೆ ಹೆಚ್ಚು ಸ್ವಾತಂತ್ರ್ಯವನ್ನು ಕೊಟ್ಟನು. ಇವನು ಕಳ್ಳಕಾರನ್ನು ಅದರಲ್ಲೂ ಹೆದ್ದಾರಿ ಕಳ್ಳರನ್ನು ಅಡಗಿಸಿ ರಾಜ್ಯದಲ್ಲಿ ನೆಮ್ಮದಿ ನೆಲಸುವಂತೆ ಮಾಡಿದನು. ಇತನ ಕಾಲಕ್ಕೆ ರಾಜಧಾನಿಯಾದ ಗುಲಬರ್ಗಾದಲ್ಲಿ ಭವ್ಯವಾದ ಸೌಧಗಳ ನಿರ್ಮಾಣವಾದವು. ಸುಂದರವಾದ ಜಾಮಿ ಮಸೀದಿಯು ಇವನ ಕಾಲದಲ್ಲಿ ನಿರ್ಮಿತವಾಯಿತು. ವಿದ್ವಾಂಸರಿಗೆ ಪ್ರೋತ್ಸಾಹ ನೀಡಿದನು. 'ಜೈನುದ್ದೀನ್ ದೌಲತಾಬಾದಿ' ಮತ್ತು 'ನಿಜಾಮುದ್ದೀನ್ ಬರಾನಿ" ಇತನ ಆಸ್ಥಾನವನ್ನು ಅಲಂಕರಿಸಿದ್ದರು. ೧೩೭೫ ರಲ್ಲಿ ಮಹಮದ್‌ಷಾ ಮರಣ ಹೊಂದಿದನು.

**ಮುಜಾಹಿದ್‌ಷಾ (೧೩೭೪-೭೭) :**

ಮಹಮ್‌ದಷಾನ ಮರಣದ ನಂತರ ಆತನ ಮಗ ಮುಜಾಹಿದ್‌ಷಾನು ಅಧಿಕಾರಕ್ಕೆ ಬಂದನು. ಇತನ ಕೇವಲ ಮೂರು ವರ್ಷಗಳ ಕಾಲ ಆಳ್ವಿಕೆ ಮಾಡಿದ. ಇತನು ಆಡಳಿತದಲ್ಲಿ ಸುಧಾರಣೆಯನ್ನು ಕೈಗೊಂಡು ದೇಶೀಯ ಅಧಿಕಾರಗಳ ಜೊತೆಗೆ ಪರ್ಷಿಯನ್ನರು ಮತ್ತು ತುರ್ಕಿಸ್ಥಾನರು ಮೊದಲಾದ ವಿದೇಶೀಯ ಅಧಿಕಾರಗಳನ್ನು ಪ್ರಮುಖ ಹುದ್ದೆಗಳಿಗೆ ನೇಮಕ ಮಾಡಿದನು. ಇದರ ಪರಿಣಾಮವಾಗಿ ಎರಡು ಗುಂಪುಗಳಲ್ಲಿಯೂ ಕಚ್ಚಾಟ, ತಿಕ್ಕಾಟ ಆರಂಭವಾಯಿತು. ಇವನ ಕಾಲದಲ್ಲಿ ವಿಜಯನಗರದೊಂದಿಗೆ ಪ್ರದೇಶಗಳ ಹಂಚಿಕೆಯ ವಿಷಯದಲ್ಲಿ ಯುದ್ಧವಾಯಿತು. ವಿಜಯನಗರದ ಮೇಲೆ ಕೈಗೊಂಡ ಸೈನಿಕ ಕಾರ್ಯಚರಣೆಯು ವಿಫಲವಾಗಲು ತನ್ನ ಚಿಕ್ಕಪ್ಪನಾದ ದಾವೂದ್‌ಖಾನನೇ ಕಾರಣನೇಂದು ಆಪಾದಿಸಿ ಸುಲ್ತಾನ ಅವನನ್ನು ಚಿತ್ರ ಹಿಂಸೆಗೆ ಗುರಿಮಾಡಿದನು. ಇದರಿಂದ ಕೋಪಗೊಂಡ ದಾವೂದ್‌ಖಾನನು ಮುಜಾಹಿದನನ್ನು ೧೩೭೭ ರಲ್ಲಿ ಕೊಲೆಮಾಡಿದನು.

ಅಧಿಕಾರಕ್ಕೆ ಬಂದ ದಾವುದ್‌ಖಾನ್‌ನ ಕಾಲದಲ್ಲಿ ವಿಜಯನಗರದ ಹರಿಹರನೊಡನೆ ಯುದ್ಧವಾಯಿತು. ರಾಜ್ಯದಲ್ಲಿ ಅನೇಕ ಗಲಭೆಗಳಂಟಾದವು. ಇಂತಹ ಸಂಧಿಗ್ಧ ಪರಿಸ್ಥಿತಿಯಲ್ಲಿ ಸುಲ್ತಾನನು ಮಸಿದಿಯಲ್ಲಿ ಪ್ರಾರ್ಥನೆ ಸಲ್ಲಿಸುತ್ತಿದಾಗ ಆತನನ್ನು ಕೊಲೆ ಮಾಡಲಾಯಿತು.

**ಎರಡನೆಯ ಮಹಮದ್‌ಷಾ ಕ್ರಿಶ ೧೩೭೭-೧೩೯೭ :**

ಇತನು ಶಾಂತಿ ಪ್ರಿಯನು ಧಾರ್ಮಿಕ ಪ್ರವೃತ್ತಿಯುಳ್ಳವನೂ ಆಗಿದ್ದನು. ಅಲ್ಲದೆ ಇವನು ಪ್ರಜ್ಞಾವಂತ ಆಡಳಿತಗಾರ ಹಾಗೂ ಸ್ವತಃ ಪಂಡಿಕತನೂ ಆಗಿದನು. ಪರ್ಷಿಯಾ ದೇಶದ ಹಫೀಸ್ ವಿದ್ವಾಂಸನ ಮಹತ್ವವನ್ನು ತಿಳಿದು ತನ್ನ ಆಸ್ಥಾನಕ್ಕೆ ಭೇಟಿ ಕೊಡಬೇಕೆಂದು ಅವನಗೆ ಒಂದು ಆಹ್ವಾನ ಪತ್ರಿಕೆಯನ್ನು ಕಳುಹಿಸಿದುದಲ್ಲದೆ ಹೇರಳವಾಗಿ ಬಹುಮಾನವನ್ನು ಕಳುಹಿಸಿದನು. "ತನ್ನ ಆಸ್ಥಾನದ ಸದರ್-ಇ-ಜಹಾನ್ (ಮುಖ್ಯ ನಾಯಧೀಶ) ನಾಗಿ 'ಫಜುಲ್ ಅಂಜು' ಎಂಬ ಪ್ರಸಿದ್ಧ ಪಂಡಿತನನ್ನು ನೇಮಿಸಿದನು"[೫] ಇತನ ಕಾಲದಲ್ಲಿ ರಾಜ್ಯದಲ್ಲಿ ಶಾಂತಿ ಮತ್ತು ಸುವ್ಯವಸ್ಥೆ ನೆಲಸಿತ್ತು. ಸುಲ್ತಾನನು ಜನಹಿತ ಕಲ್ಯಾಣವನ್ನು ಗಮನದಲ್ಲಿಟ್ಟುಕೊಂಡ ಆಳ್ವಿಕೆ ಮಾಡಿದನು. ಈತನ ಕಾಲದಲ್ಲಿ ದೇಶವು ಭೀಕರ ಕ್ಷಾಮಕ್ಕೆ ಬಲಿಯಾಯಿತು. ಬೇರೆ ರಾಜ್ಯಗಳಿಂದ ಆಹಾರ ಧಾನ್ಯಗಳನ್ನು ತರಿಸಿಕೊಂಡು ಪ್ರಜೆಗಳಿಗೆ ತೊಂದರೆಯಾಗದಂತೆ ನೋಡಿಕೊಂಡನು. ಇವನು ಯುದ್ಧಕ್ಕೆ ಮಹತ್ವ ನೀಡಲಿಲ್ಲ. ಆದರಿಂದ ಅನೇಕ ಪ್ರದೇಶಗಳು ಇವನಿಂದ ಕೈತಪ್ಪಿ ಹೋದವು.

ಕ್ರಿಶ ೧೩೯೭ ರಲ್ಲಿ ಇತನು ಜ್ವರಪೀಡಿತನಾಗಿ ಅಸುನೀಗಿದನು. ಇತನ ಮಕ್ಕಳಾದ ಘಿಯಾಸುದ್ದೀನ್ ಮತ್ತು ಶ್ಯಾಮ್‌ಸುದ್ದೀನ್. ಅನುಕ್ರಮವಾಗಿ ಮೂರು ಮತ್ತು ಆರು ತಿಂಗಳ ಕಾಲ ರಾಜ್ಯಭಾರ ಮಾಡಿದರು. ಅನಂತರ ಫಿರೋಜ್‌ಷಾಹಾನು ಸಿಂಹಾಸನವನ್ನೇರಿದನು.

**ಫಿರೋಜಷಹಾ ಕ್ರಿಶ ೧೩೯೭-೧೪೨೨ :**

ಫಿರೋಜಷಹಾ ಎರಡನೆ ಮಹಮದ್‌ನ ಅಳಿಯ ಹಾಗೂ ಅಲ್ಲಾವುದ್ದೀನ್ ಹಸನ್ ಬಹಮನ್‌ಷಾಹನ ಮೊಮ್ಮಗನಾಗಿದ್ದ. ಅಪ್ರತಿಮವೀರನೂ, ಮಹತ್ವಾಕಾಂಕ್ಷಿಯೂ ಆದ ಫಿರೋಜ ಇಪ್ಪತ್ತೈದು ವರ್ಷಗಳ ಕಾಲ ದರ್ಪದಿಂದ ರಾಜ್ಯಭಾರ ಮಾಡಿದನು. ಒಳ್ಳೆಯ ದೃಢಕಾಯನೂ, ಸೂಕ್ಷ್ಮಮತಿಯೂ ಆದ ಫಿರೋಜನು ಬಹಮನಿ ಸುಲ್ತಾನರಲ್ಲೆ ಅತ್ಯಂತ ಶ್ರೇಷ್ಠ ದೊರೆಯೆಂದು ಫರಿಸ್ತಾ ಹೇಳುತ್ತಾನೆ. "ಫಿರೋಜನು ಪ್ರಜ್ಞಾವಂತ ಆಡಳಿತಗಾರ ಹಾಗೂ ಕರುಣಾಮಯಿಯಾಗಿದ್ದ. ಇವನು ಅನೇಕ ಬ್ರಾಹ್ಮಣ ಸೆರೆಯಾಳುಗಳನ್ನು ಬಿಡುಗಡೆ ಮಾಡಿದನು"[೬]. ಹಾಗೂ ಬ್ರಾಹ್ಮಣರನ್ನು ಪ್ರಮುಖ ಸರಕಾರಿ ಹುದ್ದೆಗಳಲ್ಲಿ ನೇಮಕ ಮಾಡಿಕೊಂಡನು. ಫಿರೋಜಷಾಹ ಸ್ವತಃ ಕವಿಯಾಗಿದ್ದು ಅನೇಕ ಸಾಹಿತ್ಯಿಕ ಬರವಣಿಗೆಗಳನ್ನು ಬರೆದನು. ಅವನಿಗೆ ಅನೇಕ ಭಾಷೆಗಳ ಪರಿಚಯವಿದ್ದಿತು. ಇದರಿಂದ ಅವನು ರಾಣಿವಾಸದವರೊಂದಿಗೆ ಮಾತನಾಡುವಾಗ ಅವರವರ ಭಾಷೆಯಲ್ಲಿಯೇ ಸಂಭಾಷಣೆ ನಡೆಸುತ್ತಿದ್ದನು. ಇತನು ಒಳ್ಳೆಯ ಸುಂದರ ಅಕ್ಷರ ವಿನ್ಯಾಸ (ಕ್ಯಾಲಿಯೋಗ್ರಫಿ) ಗಾರನಾಗಿದ್ದ. ಹಾಗೂ ಅನೇಕ ಪ್ರಸಿದ್ಧ ವಿಧ್ವಾಂಸರು ಇವನ ಆಸ್ಥಾನದಲ್ಲಿ ನೆಲಸಿದರು.

ಇತನು ಗುಲಬರ್ಗಾ ಹಾಗೂ ಫಿರೋಜಬಾಧಗಳಲ್ಲಿ ಅನೇಕ ಸ್ಮಾರಕಗಳನ್ನು ನಿರ್ಮಿಸಿದ. "ದೌಲತಾಬಾದನಲ್ಲಿ ಹಸನ್-ಫಿಲಾನಿ ಎಂಬ ಖಗೋಳ ವಿಜ್ಞಾನಿಯ ಮಾರ್ಗದರ್ಶನದಂತೆ ೧೪೦೭ ರಲ್ಲಿ ಒಂದು ಖಗೋಳ ವೀಕ್ಷಣಾಲಯವನ್ನು ನಿರ್ಮಿಸಿದನು. ಹಾಗೂ ಭೀಮಾ ನದಿಯ ತೀರದಲ್ಲಿ

ಫಿರೋಜಾಬಾದ್ ಎಂಬ ಹೊಸ ನಗರ ನಿರ್ಮಿಸಿ ಅದನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು"[೯]. ಹಾಗೆಯೆ ಅಲ್ಲಿ ವಿವಿಧ ರಾಜ್ಯಗಳಿಂದ ತಂದ ೮೦೦ ಮಂದಿ ಸ್ತ್ರೀಯರಿಗೆ ವಸತಿ ಸೌಲಭ್ಯವನ್ನು ಕಲ್ಪಿಸಿಕೊಟ್ಟನು. ಫಿರೋಜಷಾನು ವಿಜಯನಗರದೊಂದಿಗೆ ೧೩೯೮, ೧೪೦೬ ಮತ್ತು ೧೪೨೨ ರಲ್ಲಿ ಮೂರು ಪ್ರಮುಖ ಯುದ್ಧಗಳನ್ನು ನಡೆಸಿದ. ಕ್ರಿಶ ೧೪೦೧ ರಲ್ಲಿ ದೆಹಲಿಯನ್ನು ಆಕ್ರಮಿಸಿದ ತೈಮೂರನ ಆ ಸ್ಥಾನಕ್ಕೆ ರಾಯಭಾರ ಸಂಬಂಧ ಕಳುಹಿಸಿದ. ಫಿರೋಜ ತನ್ನ ಸಹೋದರನಾದ ಅಹಮ್ಮದನನ್ನು ಪ್ರಧಾನಮಂತ್ರಿಯಗಿ ನೇಮಿಸಿ ರಾಜ್ಯವನ್ನು ಸುಭದ್ರಗೊಳಿಸಿದನು. ಇವನ ಆಳ್ವಿಕೆ ಕಾಲದಲ್ಲಿ ಸೂಫಿಸಂತ ಹಜರತ್ ಗೇಸುದರಾಜ್‌ನೊಂದಿಗೆ ಧಾರ್ಮಿಕ ಭಿನ್ನಾಭಿಪ್ರಾಯಗಳು ಉಂಟಾದವು.

ಫಿರೋಜನು ತನ್ನ ಮಗ ಹಸನ್‌ಖಾನನನ್ನು ತನ್ನ ಉತ್ತರಾಧಿಕಾರಿಯಾಗಿ ನೇಮಿಸಿದ. ಒಂದು ಕಾಲಕ್ಕೆ ತನ್ನ ಸಾಧನೆಗಳ ಜೊತೆಗಾರನಾಗಿದ್ದ ತನನ ತಮ್ಮನೇ ಆದ ಅಹಮದ್‌ಖಾನನನ್ನು ಕೊಲ್ಲುವ ಪ್ರಯತ್ನಗಳನ್ನು ಕೂಡಾ ಮಾಡಿದ. ಅಹಮದ್‌ನು ಸಂತ ಹಜರತ್ ಗೇಸುದರಾಜ್‌ನ ಬೆಂಬಲದಿಂದ ಅಣ್ಣನ್ನು ನಿರ್ಲಕ್ಷಸಿ, ಕ್ರಿ.ಶ ೧೪೨೨ ರಲ್ಲಿ ಸುಲ್ತಾನನಾದನು. ಇವನು ಅಧಿಕಾರ ವಹಿಸಿಕೊಂಡ ಒಂದು ವಾರದೊಳಗೆ ಫಿರೋಜನು ಮೃತನಾದನು.

ಫಿರೋಜನು ಕಲಾ ಪ್ರೇಮಿಯಾಗಿದ್ದರಿಂದ ಬಹುಭಾಷಾ ಪಂಡಿತರನ್ನು ತನ್ನ ಆಸ್ಥಾನಕ್ಕೆ ಆಹ್ವಾನಿಸಿದನು. ಸಾಗರದಾಚೆಯ (ಪರ್ಷಿಯಾ) ನಾಡುಗಳಿಂದಲೂ ವಿದ್ವಾಂಸರು ಇವನ ಆಸ್ಥಾನಕ್ಕೆ ಬಂದಿದ್ದುಂಟು. ಧರ್ಮದ ಬಗ್ಗೆ ಉದಾರವಾಗಿ ನಡೆದುಕೊಳ್ಳುತ್ತಿದ್ದ ಇವನ ಕಾಲದಲ್ಲಿ ವಿದೇಶಿ ಮುಸ್ಲಿಂರಾದ ಪರ್ಶಿಯರು, ಅರಬ್ಬರು ಮತ್ತು ತುರ್ಕರು ಬಹಮನಿ ರಾಜ್ಯಕ್ಕೆ ಬಂದು ನೆಲೆಸಿದರು. ಇವರು ಕ್ರಮೇಣ ರಾಜಕೀಯದಲ್ಲಿ ಪ್ರಬಲರಾದರು. ಇವರನ್ನು 'ಅಫಾಕೀ'ಯರೆಂದು ಕರೆಯಲಾಯಿತು. ಅಫಾಕೀಯರು ಮತ್ತು ಹಳೆಯ ಮುಸ್ಲಿಂ ಶ್ರೀಮಂತರಾದ ದಖ್ಖನಿಯರ ನಡುವೆ ಹಗೆತನ ಉಂಟಾಗಿ ಇದು ಮುಂದೆ ಭೀಕರತೆಯನ್ನು ಪಡೆದುಕೊಂಡು ಬಹಮನಿ ರಾಜ್ಯವನ್ನೇ ಬಲಿ ತೆಗೆದುಕೊಂಡಿತ್ತು.

**ಒಂದನೆ ಅಹಮದ್‌ಷಹಾ :**

ಅಹಮದ್‌ನು ಅಧಿಕಾರಕ್ಕೆ ಬಂದ ಸಮಯದಲ್ಲಿ ಎರಡು ವಿಭಿನ್ನ ಅನುಭವಗಳನ್ನು ಪಡೆಯಬೇಕಾಯಿತು. ಇವನ ಅಣ್ಣ ಗತಿಸಿದ್ದರಿಂದ ನೆಮ್ಮದಿಯ ನಿರಾಳವನ್ನು ಪಡೆದರೆ, ತನ್ನನ್ನು ಅಧಿಕಾರಕ್ಕೆ ತಂದ ಹಜರತ್ ಗೇಸುದರಾಜನ ಮರಣದಿಂದ ಆಘಾತಕ್ಕೆ ಗುರಿಯಾಗಬೇಕಾಯಿತು. ಇವನ ಕಾಲದಲ್ಲಿ ಬಹಮನಿ ಇತಿಹಾಸದಲ್ಲಿ ಬೀದರ ಯುಗ ಆರಂಭವಾಗುತ್ತದೆ. ತಾನು ಸಿಂಹಾಸನಕ್ಕೆ ಬಂದ ಮೇಲೆ ರಾಜಧಾನಿಯನ್ನು ಗುಲಬರ್ಗಾದಿಂದ ಬೀದರಗೆ ವರ್ಗಾಯಿಸಿದನು. ಇದಕ್ಕೆ ಹಜರತ್‌ನ ಸಾವೆ ಕಾರಣವಾಯಿತು. ಗುಲಬರ್ಗಾದ ಆಸ್ಥಾನದ ಪಿತೂರಿಗಳು, ಕೊಲೆಗಳು, ವಿಸ್ವಾಸಘಾತುಕತನವು ಅವನಲ್ಲಿ ಜಿಗುಪ್ಸೆಯನ್ನು, ಆತಂಕವನ್ನು ಉಂಟುವಾಡಿತು. ಬೀದರ ರಾಜ್ಯದ ಮಧ್ಯ ಭಾಗದಲ್ಲಿದ್ದು. ಉತ್ತಮ ಹವಾಮಾನದಿಂದ ಕೂಡಿತ್ತು.

ಪರ್ಷಿಯ ಮತ್ತು ಮಧ್ಯ ಏಷ್ಯಾದ ಮಂಗೋಲರು ಮತ್ತು ತೈಮೂರರ ಸಂಪರ್ಕ ಬಹಮನಿ ರಾಜ್ಯದ ಮೇಲಾಯಿತು. ಅಲ್ಲಿಂದ ಗಣ್ಯ ವ್ಯಕ್ತಿಗಳಿಂದಾಗಿ ಬಂದ ಅಫಾಕೀಗಳು ಪ್ರಬಲರಾದರು. ಇದು ಅಂದಿನ ವಾಸ್ತು ಮತ್ತು ಕಲೆಯ ಮೇಲೂ ಪ್ರಭಾವ ಬೀರಿತು. ಇಲ್ಲಿನ ಸಂಪರ್ಕದಿಂದಾಗಿ ಅನೇಕ ಸಂತರು ಇಲ್ಲಿಗೆ ಧಾವಿಸಿದರು. ಕಿರ್ಮಾನಿಷಾ ನಿಮತ್-ಉಲ್ಲನ ಮಗ ಖಲ್ಜೀಲ್-ಉಲ್ಲ ಬೀದರಗೆ ಬಂದು ನೆಲೆಸಿ ಸುಲ್ತಾನನ ಮಾರ್ಗದರ್ಶಕನಾದ. ಅಹಮದ್‌ಷಹಾ ಸಾಹಿತ್ಯ ಅಭಿಮಾನಿಯಾಗಿದ್ದು ಪ್ರಸಿದ್ಧ ಪರ್ಶಿಯಾ ಕವಿ ಜನಾಬ್ ಅಜಾರಿ ಇವನ ಆಸ್ಥಾನದ ಕವಿಯಾಗಿದ್ದನು. ಇವನು 'ಬಹಮನನಾಮ್' ಎಂಬ ಕೃತಿಯನ್ನು ಪೂರ್ಣಗೊಳ್ಳಿಸಿದನು. ಇವನು ಅತ್ಯಂತ ದಯಾಳುವಾಗಿದ್ದು ರಾಜ್ಯದಲ್ಲಿ ಭೀಕರ ಕ್ಷಾಮ ಆವರಿಸಿದಾಗ ದೇವರಿಗೆ ಪ್ರಾರ್ಥನೆ ಸಲ್ಲಿಸಿದನೆಂದು ತಿಳಿದು ಬರುತ್ತದೆ. ಅಹಮದ್‌ಷಹಾ 'ವಾಲಿ' ಎಂಬ ಬಿರುದನ್ನು ಪಡೆದಿದ್ದನು. 'ವಾಲಿ' ಎಂದರೆ 'ಸಂತ' ಎಂದರ್ಥ. ದಖ್ಖನ್‌ನ ಜನತೆಗೆ ಇವನು ಸಂತನೆಂದೆ ಪರಿಚಿತನಾಗಿದ್ದಾನೆ. "ಇವನು ಮುಕ್ಕಾಲು ಮೈಲಿ ಉದ್ದ ಮತ್ತು ಅರ್ಧ ಮೈಲಿ ಅಗಲವುಳ್ಳ ಚತುರ್ಭುಜಾಕಾರದ ಕೋಟೆಯನ್ನು ಬೀದರನಲ್ಲಿ ನಿರ್ಮಿಸಿದ. ಈಗಲೂ ಅಲ್ಲಲ್ಲಿ ಹೊಳೆಯುವ ಮೆರಗು ಹಾಕಿರುವ ಫಲಕಗಳಿಂದ ಕೂಡಿರುವ ಮತ್ತು ಇರಾನಿಯನ್ ಪ್ರಭಾವವನ್ನು ವ್ಯಕ್ತಪಡಿಸುವ ತಖ್ತ್‌ಮಹಲ್ ಮತ್ತು ಅಂಡಾಕಾರದ ಭಾಗದ ಮೇಲೆ ನಿಂತಿರುವ ಕಮಾನುಗಳನ್ನುಳ್ಳ ಸುಲ್ತಾನನ ಗೋರಿ ಮುಂತಾದವು ಆಗಿನ ಕಾಲದಲ್ಲಿ ನಿರ್ಮಿವಾದ ಕಟ್ಟಡಗಳು"[೮] ಅಹಮದ್‌ಷಹಾ ತನ್ನ ಕೊನೆಗಾಲದಲ್ಲಿ ಅಸ್ವಸ್ಥನಾಗಿದ್ದು ೧೪೩೬ ರಲ್ಲಿ ಮರಣ ಹೊಂದಿದನು.

**ಎರಡನೆ ಅಲ್ಲಾವುದ್ದೀನ್ ಅಹಮದ್ ಕ್ರಿಶ ೧೪೩೬-೧೪೫೮ :**

ಅಹಮದ್‌ಷಾಹನ್‌ನ ಮರಣ ನಂತರ ಅವನ ಮಗ ಅಲ್ಲಾವುದ್ದೀನ ಅಹಮದ್‌ನು ಬಹಮನಿ ಸಾಮ್ರಾಜ್ಯದ ಸುಲ್ತಾನನಾದ. ತಂದೆಯ ಸಾಮರ್ಥ್ಯ ಇವನಲ್ಲಿರಲಿಲ್ಲ. ದುರ್ಬಲ ಮನಸ್ಸಿನ ಮುಖೇಡಿ ವ್ಯಕ್ತಿಯಾಗಿದ್ದನು. ಇವನ ಕಾಲದ ದುರದೃಷ್ಟಕರವಾದ ಬೆಳವಣಿಗೆಯೆಂದರೆ ದಖ್ಖನಿಯರ ಮತ್ತು ಆಫಾಕೀಯರ ನಡುವೆ ತೀವ್ರಗೊಂಡ ವರ್ಗ ಭೇದ ನೀತಿ. ಕಡಲಾಚೆಯಿಂದ ಬಂದ ವಿದೇಶಿಗರಾದ ದಿಲಾವರ್‌ಖಾನ ಅಫ್ಘಾನೀಯನ್ನು ವಕೀಲ (ಪ್ರಧಾನಿ) ನನ್ನಾಗಿ, ಖ್ವಾಜ-ಇ-ಜಹಾನ್ ಅಸ್ತ್ರಾಬಾದಿಯನ್ನು ವಜೀರ ಅಥವಾ ಮಂತ್ರಿಯನ್ನಾಗಿ ನೇಮಿಸಿದ. ಇವನು ವಿಜಯನಗರ, ತೆಲಂಗಾಣ ರಾಜ್ಯಗಳಲ್ಲದೆ, ಮುಸ್ಲಿಂ ರಾಜ್ಯಗಳಾದ ಗುಜುರಾತ, ಖಾಂದೇಶ, ಮತ್ತು ಮಾಳವಾದ ಮೇಲೆ ದಂಡೆತ್ತಿ ಹೋದನು. ಅಲ್ಲಾವುದ್ದೀನ್ ಅಹಮದ್ ಬೀದರ ಸಮೀಪ ಅಷ್ಟೂರಿನಲ್ಲಿ ತನ್ನ ತಂದೆಯ ಗೋರಿಯನ್ನು ಅತ್ಯಂತ ಸುಂದರವಾಗಿ ನಿರ್ಮಿಸಿದನು. ಅಲ್ಲದೆ ಆಡಳಿತದಲ್ಲಿ ಹಲವಾರು ಸುಧಾರಣೆಗಳನ್ನು ಕೈಗೊಂಡನು. ಸಾರ್ವಜನಿಕರಿಗಾಗಿ ಅನೇಕ ಕಲ್ಯಾಣ ಕಾರ್ಯಕ್ರಮಗಳನ್ನು ಕೈಗೊಂಡನು. ರಾಜ್ಯದಲ್ಲಿ ಮಸೀದಿಗಳು. ಶಾಲೆಗಳು ಮತ್ತು ಆಸ್ಪತ್ರೆಗಳನ್ನು ಕಟ್ಟಿಸಿದ. ನಿಮತ್‌ಬಾದ್‌ನಲ್ಲಿ ಭವ್ಯವಾದ ಅರಮನೆಯನ್ನು ಇವನು ನಿರ್ಮಿಸಿದ. ಹಾಗೂ ರಾಜ್ಯದಲ್ಲಿ ಮಧ್ಯಪಾನ ನಿಷೇಧಿಸಿದ. ಇವನ ಆಳ್ವಿಕೆ ಕಾಲಕ್ಕೆ ಇಟಾಲಿಯ ಪ್ರವಾಸಿ ನಿಕೊಲೊ ಕೌಂಟಿ ಬೀದರಗೆ ಭೇಟಿ ನೀಡಿದ.

"ಸುಲ್ತಾನ ಅಹಮದ್‌ನ ಚರ್ಮದ ಮೇಲೆ ಗಂಟುಗಳೆದ್ದು ಕ್ರಿ.ಶ ೧೪೩೮ ರಲ್ಲಿ ಮೃತನಾದನು. ಹಿಂದೂದರ್ಶನವನ್ನು ಇಷ್ಟಪಡುತ್ತಿದ್ದ ಇತನು ಪಂಡಿಕತರೊಂದಿಗೆ ಚರ್ಚಿಸುತ್ತಿದ್ದ. ಕೊನೆಯ ದಿವಸಗಳಲ್ಲಿ ಗಂಗಾಪೂರದ ನರಸಿಂಹಸರಸ್ವತಿ ಸನ್ಯಾಸಿಗಳ ಉಪದೇಶವನ್ನು ಕೇಳುತ್ತಾ ನೆಮ್ಮದಿಯನು ಪಡೆಯುತ್ತಿದ್ದ"

**ಅಲ್ಲಾವುದ್ದೀನ್ ಹುಮಾಯೂನ್‌ಷಾ ೧೪೫೮-೧೪೬೧ :**

ಅಲ್ಲಾವುದ್ದೀನ್ ಅಹಮದ್‌ನ ಮರಣದ ನಂತರ ಅವನ ಹಿರಿಯ ಮಗ ಹುಮಾಯೂನ್‌ನು ಮುಂದಿನ ಸುಲ್ತಾನನಾದ. ಇವನ ಆಳ್ವಿಕೆ ಅಲ್ಪ ಕಾಲದ್ದಾಗಿದೆ. ಇವನು ತನ್ನ ತಂದೆಯ ಸಮಾಧಿಯ ಮೇಲೆ ಭವ್ಯವಾದ ಗೋರಿಯನ್ನು ನಿರ್ಮಿಸಿದ. ಇವನ ಮತೊಂದು ಸಾಧನೆಯೆಂದರೆ ಮಹಮದ್ ಗವಾನನನ್ನು ಉನ್ನತ ಅಧಿಕಾರಿಯನ್ನಾಗಿ ನೇಮಿಸಿದನು. ಇವನ ಸಹೋದರ ಹಸನ್‌ಖಾನನು ಹಲವರ ಬೆಂಬಲದಿಂದ ರಾಜಾಧಿಕಾರವನ್ನು ಕಸಿದುಕೊಳ್ಳಲು ದಂಗೆ ಎದ್ದನು. ಆದರೆ ಅವನನ್ನು ಸೋಲಿಸಿ ಸೆರೆಹಿಡಿಯಾಲಯಿತು. ಸುಲ್ತಾನನು ಹಸನ್‌ಖಾನನ್ನು ಹಸಿದ ಹೆಬ್ಬುಲಿಗೆ ಆಹಾರವಾಗಿ ಎಸೆದ. ಅವನ ಬೆಂಬಲಿಗರನ್ನು ಕುದಿಯುವ ಎಣ್ಣೆಗೆ ಹಾಕಿ ಕೂರವಾಗಿ ಶಿಕ್ಷೆ ವಿಧಿಸಿದ. ಹುಮಾಯನ್‌ನು ಅಸಹನೆಯಿಂದ ವರ್ತಿಸಿ ಅತ್ಯಂತ ಕೌರ್ಯದಿಂದ ನಡೆದುಕೊಳ್ಳುತ್ತಿದ್ದ. ಇವನ ಕ್ರೂರ ದುರ್ವರ್ತನೆಯಿಂದಾಗಿ 'ಜಾಲೀಮ್ ಅಥವಾ ಕ್ರೂರಿ' ಎಂಬ ಹೆಸರು ಪ್ರಾಪ್ತವಾಯಿತು. ಇವನು ಇಪ್ಪತ್ತೊಂದನೆಯ ವಯಸ್ಸಿನಲ್ಲಿ ಮೃತನಾದಗ ದು:ಖಪಟ್ಟವರಿಗಿಂತ ಸಮಾಧಾನದ ನಿಟ್ಟುಸಿರು ಬಿಟ್ಟವರೆ ಹೆಚ್ಚು. ಹುಮಾಯೂನನು ಮೃತನಾಗುವ ಮೊದಲು ತನ್ನ ಕಿರಿಯಬಾಲಕ ನಿಜಾಮ್‌ಉದ್‌ದೀನ್ ಅಹಮದ್‌ನನ್ನು ಮುಂದಿನ ಸುಲ್ತಾನನಾಗಿ ನೇಮಿಸಿದ್ದ. ಸುಲ್ತಾನ ಮುನ್ನೆಚ್ಚರಿಕೆಯಿಂದ ಕಿರಿಯ ಬಾಲಕ ಪರವಾಗಿ ಆಡಳಿತ ನಡೆಸಲು ಪ್ರತಿನಿಧಿ ಸಮಿತಿಯೊಂದನ್ನು ಸ್ಥಾಪಿಸಿದ. ಖ್ವಾಜ-ಇ-ಜಹಾನ್, ತುರ್ಕ ಮಲ್ಲಿಕ್-ಉತ್-ತುಜ್ಜಾರ್, ಮಹಮದ್ ಗವಾನ್ ಮತ್ತು ರಾಜಮಾತೆ ಮುಖ್ದುಮ-ಇ-ಜಹಾನ್ ನರ್ಗಿಸ್ ಬೇಗಂರು ಈ ಸಮಿತಿಯ ಸದಸ್ಯರಾಗಿದ್ದರು. ರಾಜಮಾತೆಯು ಅಸಾಧಾರಣ ಬುದ್ಧಮತ್ತೆಯ ಅಪೂರ್ವ ವ್ಯಕ್ತಿಯಾಗಿದ್ದಳು. ಆಕೆ ಇನ್ನಿಬ್ಬರು ಸದಸ್ಯರು ನೇರವಿನಿಂದ ಅತ್ಯುತ್ತಮವಾಗಿ ಆಡಳಿತವನ್ನು ನಿರ್ವಹಿಸಿದಳು. ರಾಜ್ಯದ ಬೆಳವಣಿಗೆಯನ್ನು ಸೂಕ್ಷವಾಗಿ ತಿಳಿದುಕೊಂಡು ಕಣ್ಣಿಟ್ಟಿದ್ದಳು. ನಿಜಾಮೂದ್ದೀನ್‌ನನಿಗೆ ಕಿರಿಯ ವಯಸ್ಸಿನಲ್ಲೆ ಮದುವೆ ಏರ್ಪಡಿಸಲಾಯಿತು. ಮದುವೆಯ ದಿನವೆ ಅವನು ಮೃತನಾದ. ಹುಮಯೂನನ ಎರಡನೆ ಮಗ ಮೂರನೆ ಮಹಮದ್‌ನನ್ನು ಸುಲ್ತಾನನಾಗಿ ಮಾಡಲಾಯಿತು. ಹಮಮದ್‌ನು ಆಗಿನ್ನು ಹತ್ತು ವರ್ಷದ ಬಾಲಕ, ಖ್ವಾಜ-ಇ-ಜಹಾನನ ನಿಷ್ಠೆಯ ಬಗ್ಗೆ ರಾಜಮಾತೆಗೆ ಅನುಮಾನ ಬಂದಿದ್ದರಿಂದ ಅವನನ್ನು ಆಸ್ಥಾನದಲ್ಲಿ ಕೊಲೆ ಮಾಡಿಸಿದಳು. ಆನಂತರ ಆಕೆ ಗವಾನನ್ನು ಖ್ವಾಜ-ಇ-ಜಹಾನ್ ಅಥವಾ ಪ್ರಧಾನ ಮಂತ್ರಿಯಾಗಿ ನೇಮಿಸಿದಳು. ಮುಂದೆ ಇವನು ಕೊಲೆಯಾಗುವವರೆಗೂ ತನ್ನ ಬದುಕನ್ನು ಬಹಮನಿ ರಾಜ್ಯದ ಪ್ರಗತಿಗಾಗಿ ಮುಡಿಪಿಟ್ಟನು.

**ಮಹಮ್ಮದ್ ಗವಾನ ಕ್ರಿಶ ೧೪೧೧-೧೪೮೧ :**

ಬಹಮನಿ ರಾಜ್ಯದ ಚರಿತ್ರೆಯಲ್ಲಿ ಇತನಿಗೆ ಪ್ರಮುಖ ಸ್ಥಾನವಿದೆ. ಮಹಮದ್ ಗವಾನ ಕ್ರಿ.ಶ ೧೪೧೧ ರಲ್ಲಿ ಪರ್ಶಿಯ ದೇಶದ ಸುಸಂಸ್ಕೃತ ಕುಟುಂಬವೊಂದರಲ್ಲಿ ಜನಿಸಿದನು. ಇವನು ಹುಟ್ಟಿದ ಊರಿನ ಹೆಸರು 'ಗವಾನ್' ಎಂಬುದಾಗಿದರಿಂದ ಅವನ ಹೆಸರು ಗವಾನ್ ಎಂದಾಯಿತು. ಇವನು ೧೪೫೩ ರಲ್ಲಿ ವರ್ತಕನಾಗಿ ಬೀದರಗೆ ಬಂದನು. ಇವನು ಎರಡನೇ ಅಲ್ಲಾವುದ್ದೀನ್‌ನ ಕೃಪೆಯಿಂದ ಆಸ್ಥಾನದ ಸೇವೆಯಲ್ಲಿ ಸೇರಿಕೊಂಡ. ತನ್ನ ದಕ್ಷತೆಯಿಂದಲೂ, ಬುದ್ಧಿವಂತಿಕೆಯಿಂದಲೂ ಇತನು ದಿನ ಕಳೆದಂತೆ ಉನ್ನತ ಪದವಿಗೇರಿದನು. ಸರಕಾರದ ಎಲ್ಲಾ ಇಲಾಖೆಗಳ ಆಡಳಿತವನ್ನು ನೋಡಿಕೊಳ್ಳುವ ಶಕ್ತಿ ಸಾಮರ್ಥ್ಯ ಅವನಲ್ಲಿತ್ತು. ಸೈನಿಕ, ಹಣಕಾಸು, ಕಂದಾಯ, ನ್ಯಾಯಾಲಯ ಮತ್ತು ಸಾರ್ವಜನಿಕ ಆಡಳಿತಗಳೆಲ್ಲವನ್ನು ಇವನೊಬ್ಬನೆ ನೋಡಿಕೊಳ್ಳುತ್ತಿದ್ದನು. ಅಷ್ಟೆ ಅಲ್ಲದೆ ಸುಲ್ತಾನನಗೆ ರಾಜನೀತಿ, ರಾಜ್ಯಾಡಳಿತದಲ್ಲಿ ತರಬೇತಿ ಕೊಡುವ ಹೆಚ್ಚಿನ ಹೊಣೆಗಾರಿಕೆಯೂ ಇವನದಾಗಿತ್ತು. ಮಹಮ್ಮದ್ ಗವಾನನು ತನ್ನ ಕಾಲಕ್ಕಷ್ಟೆ ಅಲ್ಲ ಹಿಂದಿನ ಎಲ್ಲಾ ಭಾರತೀಯ ಮಹಮ್ಮ್ಮದಿಯರಲ್ಲೂ ಅತ್ಯಂತ ಪರಿಪೂರ್ಣ ದೃಢ ವ್ಯಕ್ತಿಯಾಗಿದ್ದಾನೆ. ಅವನಿಗೆ ಸಮಾನರು ಯಾರು ಇಲ್ಲ. ಅವನ ನ್ಯಾಯಪೂರ್ಣ ಉದಾತ್ತಾ ಸುಧಾರಣೆಗಳು ಅವನ ಯುದ್ಧ ಕೌಶಲ್ಯ ಸಾಹಸಗಳು, ಅವನ ನ್ಯಾಯತತ್ಪರತೆ, ತನ್ನ ಸ್ವಂತ ಅಥವಾ ಅಧಿಕಾರಿಕ ಔದಾರ್ಯದಲ್ಲಿ ಅವನ ಸಮಾನರಾರು ಇರಲಿಲ್ಲ. ಗವಾನನು ಸುಲ್ತಾನನ ಬಗ್ಗೆ ನಿಷ್ಠೆಯಿಂದ ನಡೆದುಕೊಳ್ಳುತ್ತಿದ್ದನು. ಅವನ ಸ್ವಾಮಿ ಭಕ್ತಿ ಅಷ್ಟಿಷ್ಟಲ್ಲ "ತನ್ನ ದೊರೆ ಹುಡುಗನಾಗಿದ್ದಾಗ ಸ್ವಾಮಿ ಭಕ್ತಿಯಿಂದ ರಾಜ್ಯ ನಡೆಸಿದನು. ತಾನೆ ಸಿಂಹಾಸನವನ್ನೆರುವ ಚಪಲಕ್ಕೆ ತುತ್ತಾಗಲಿಲ್ಲ. ಹಣಗಳಿಸುವ ಆಸೆಮಾಡಲಿಲ್ಲ."

"ಅಲ್ಲಾವುದ್ದೀನ್ ನಂತರ ಬಂದ ಹುಮಾಯೂನ ಕಾಲದಲ್ಲಿ ವಜೀರ್ ಅಥವಾ ಪ್ರಧಾನಿಯಾಗಿ ಆಯ್ಕೆಗೊಂಡನು ಮತ್ತು 'ಖ್ವಾಜಾ-ಇ-ಜಹಾನ್' ಎಂಬ ಬಿರುದು ಪಡೆದನು. ಅದೇ ಹುದ್ದೆಯಲ್ಲಿ ನಿಜಾಂಷಾ ಮತ್ತು ಮೂರನೆ ಮಹಮದ್‌ನ ಆಳ್ವಿಕೆಯಲ್ಲಿ ಮುಂದುವರೆದನು"[೧೦] ಗವಾನ ಯುದ್ಧದ ಮೂಲಕ ರಾಜ್ಯಕ್ಕೆ ಒದಗಿ ಬಂದ ಗಂಡಾಂತರಗಳನ್ನು ಹೋಗಲಾಡಿಸಿದ. ರಾಜ್ಯದ ಗಡಿಯನ್ನು ವಿಸ್ತರಿಸಿ ಬಹಮನಿಯ ಪ್ರತಿಷ್ಠೆಗಳನ್ನು ಹೆಚ್ಚಿಸಿದನು. ಇವನ ಕಾಲದಲ್ಲಿ ಅಫಕೀ (ವಿದೇಶಿಷಿಯಾ) ಮತ್ತು ದಖ್ಖನಿಯರ (ಸುನ್ನಿ) ಪಂಗಡಗಳ ನಡುವೆ ಉಂಟಾಗುತ್ತಿದ್ದ ಘರ್ಷಣೆಯನ್ನು ತಡೆದನು. ರಾಜ್ಯದ ಯಾವ ಇಲಾಖೆಯು ಗವಾನನ ಕಣ್ಣುತಪ್ಪಿಸಿ ಕೆಲಸಕಾರ್ಯ ಮಾಡುವಂತಿರಲಿಲ್ಲ. ಹಣಕಾಸು, ನ್ಯಾಯ ಮತ್ತು ಶಿಕ್ಷಣ ಕ್ಷೇತ್ರಗಳಲ್ಲಿ ಅವನು ಅನೇಕ ಸುಧಾರಣೆಗಳನ್ನು ಜಾರಿಗೆ ತಂದನು. ರಾಜ್ಯವನ್ನು ಎಂಟು ತರಫಗಳಾಗಿ ವಿಂಗಡಿಸಿ ಪ್ರತಿಯೊಂದು ವಿಭಾಗಕ್ಕೂ ಒಬ್ಬೊಬ್ಬ ಆಡಳಿತಾಧಿಕಾರಿಯನ್ನು ನೇಮಿಸಿದನು. ಪ್ರಾಂತಾಧಿಕಾರಿಯು ಕೇಂದ್ರ ಸರ್ಕಾರದ ನಿಯಮಗಳಿಗನುಗುಣವಾಗಿ ತನ್ನ ಜವಾಬ್ದಾರಿಯನ್ನು ನಿರ್ವಹಿಸಬೇಕಾಗಿತ್ತು. ಅವನು ಸರ್ವಾಧಿಕಾರಿಯಾಗಲು ಅವಕಾಶವಿರಲಿಲ್ಲ. ಪ್ರಾಂತಗಳಲ್ಲಿ ಕೆಲವು ಪ್ರದೇಶಗಳು ಸುಲ್ತಾನನಿಗೆ ಮೀಸಲಾಗಿದ್ದವು. ಅವುಗಳಲ್ಲಿ ಬಂದ ಹುಟ್ಟುವಳಿಯನ್ನು ಸುಲ್ತಾನನು ತನ್ನ ಸ್ವಂತಕ್ಕಾಗಿ ವಿನಿಯೋಗಿಸಿಕೊಳ್ಳುತ್ತಿದ್ದನು. ಅವುಗಳ ಆಡಳಿತವನ್ನು ನಡೆಸಲು ಪ್ರತ್ಯೇಕವಾದ

ಅಧಿಕಾರಿಗಳು ನೇಮಕವಾಗುತ್ತಿದ್ದರು. ಅವರೆ ಜಿಲ್ಲಾ ಕಲೆಕ್ಟರುಗಳು ಒಂದು ಪ್ರಾಂತದಲ್ಲಿ ಒಂದು ಕೋಟೆ ಹೊರತು ಉಳಿದೆಲ್ಲ ಕೋಟೆಕೊತ್ತಲುಗಳು ಸುಲ್ತಾನನಿಗೆ ಸೇರಿರುತ್ತಿದ್ದವು. ಇವುಗಳನ್ನು ನೋಡಿಕೊಳ್ಳುವುದಕ್ಕಾಗಿ ಸುಲ್ತಾನನು ಸೈನಿಕ ಆಡಳಿತಾಧಿಕಾರಿಗಳನ್ನು ನೇಮಿಸುತ್ತಿದ್ದನು. ಇವರ ಸಂಬಳ ಮತ್ತು ಭತ್ಯೆಗಳು ಕೇಂದ್ರ ಸರಕಾರದಿಂದಲೆ ಪಾವತಿಯಾಗುತ್ತಿದ್ದವು. ಇದರಿಂದ ಯಾರು ದಂಗೆ ಏಳಲು ಅವಕಾಶವಿರಲಿಲ್ಲ. ರಾಜ್ಯವು ವಿಸ್ತಾರಗೊಂಡಂತೆ ಕೇಂದ್ರ ಮತ್ತು ಪ್ರಾಂತಾಧಿಕಾರಿಗಳ ಮೇಲೆ ನಿಯಂತ್ರಣ ಮತ್ತು ಮೇಲ್ವಿಚಾರಣೆಯನ್ನು ಬಿಗಿಪಡಿಸಲಾಯಿತು. ಈ ಕ್ರಮಗಳಿಂದ ದೇಶದಲ್ಲಿ ಶಾಂತಿ, ನೆಮ್ಮದಿ ನೆಲೆಸಿ ಪ್ರಜೆಗಳು ಸುಖದಿಂದ ಬಾಳಲು ಅವಕಾಶವಾಯಿತು. ಗವಾನನು ಭೂಕಂದಾಯಕ್ಕೆ ಸಂಬಂಧಪಟ್ಟ ಅಡಳಿತವನ್ನು ಸುಧಾರಿಸಿದನು. ಭೂಮಿಯನ್ನು ಅಳತೆಮಾಡಿಸಿ, ಗಡಿಕಲ್ಲುಗಳನ್ನು ಹಾಕಿಸಿ, ರೈತರು ಕೊಡಬೇಕಾದ ಕಂದಾಯವನ್ನು ನಿಗದಿಪಡಿಸಿದನು. ದೇಶದ ಶಾಂತಿ ಸುಭದ್ರತೆಗಳು ಸುಸಜ್ಜಿತವಾದ ಸೈನಿಕ ಪಡೆಯನ್ನು ಅವಲಂಬಿಸಿದ್ದರಿಂದ ಗವಾನನು ಸೈನಿಕರಿಗೆ ಎಲ್ಲ ಸೌಲಭ್ಯಗಳನ್ನೂ ಒದಗಿಸಿದ್ದನು. ಅಂದಿನ ಸೈನಿಕರು ಪಡಯುತ್ತಿದ್ದ ಸಂಬಳದ ಮೊತ್ತವು ಬ್ರಿಟಿಷ್ ಭಾರತದ ಸೈನಿಕರಿಗೂ ದೊರೆಯುತ್ತಿರಲಿಲ್ಲವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಗವಾನನು ಶಿಕ್ಷಣಾಭಿವೃದ್ಧಿಗೆ ಹೆಚ್ಚು ಪ್ರೋತ್ಸಾಹ ನೀಡಿದನು. ೧೪೭೨ರಲ್ಲಿ ಅವನು ಬೀದರನಲ್ಲಿ ಒಂದು ಮಹಾವಿದ್ಯಾಪೀಠವನ್ನು ಸ್ಥಾಪಿಸಿ ಅಲ್ಲಿ ಎಲ್ಲ ವಿದ್ಯಾರ್ಥಿಗಳಿಗೂ ಊಟ, ವಸತಿ ಸೌಕರ್ಯಗಳನ್ನು ಒದಗಿಸಿದನು. ವಿದೇಶಿ ಸ್ಥಪತಿಗಳಿಂದ ನಿರ್ಮಾಣವಾದ ವಿದ್ಯಾಲಯದ ಕಟ್ಟಡವು ಮೂರು ಅಂತಸ್ತುಗಳನ್ನೊಳಗೊಂಡು ಭವ್ಯವೂ ಮತ್ತು ಅಪೂರ್ವವೂ ಆದ ಶಿಲ್ಪಾಕೃತಿಯಾಗಿ ಶೋಭಿಸುತ್ತಿತ್ತು. ಅದರಲ್ಲಿ ವಿಶಾಲವಾದ ಸಭಾಂಗಣಗಳೂ, ಉಪನ್ಯಾಸಭವನಗಳೂ, ಸಣ್ಣ ಕೊಠಡಿಗಳೂ ಇದ್ದವು. ಅದರ ಗೋಡೆಗಳ ಮೇಲೆ ಖುರಾನಿನ ಕೆಲವು ಅಮೃತವಾಣಿಗಳನ್ನು ಕೆತ್ತಲಾಗಿತ್ತು. ಅದರಲ್ಲಿದ್ದ ಗ್ರಂಥಾಲಯವು ಬಹು ದೊಡ್ಡದಾಗಿದು ಗವಾನನು ತನ್ನ ೩೦೦೦ ಗ್ರಂಥಗಳನ್ನು ಅದಕ್ಕೆ ದಾನವಾಗಿ ಕೊಟ್ಟಿದ್ದನು. ವಿದ್ಯಾರ್ಥಿಗಳು ಇಲ್ಲಿ ಉಚಿತವಾಗಿ ಶಿಕ್ಷಣ ಪಡೆಯುತ್ತಿದ್ದರು. ಇಲ್ಲಿದ್ದ ಶಿಕ್ಷಕರು ವಿಧ್ವಾನ್ ಪಂಡಿತರಾಗಿದ್ದರು. ಈ ಕಟ್ಟಡದ ಭಗ್ನಾವಶೇಷಗಳನ್ನು ಇಂದಿಗೂ ನೋಡಬಹುದು. 'ಸರ್ ರಿಚರ್ಡ್ ಟೆಂಪಲ್' ಎಂಬ ವಿದೇಶಿ ಪ್ರವಾಸಿಯು ಗವಾನನ ಮನೋವೈಶಾಲ್ಯವನ್ನೂ, ಮಹಾವಿದ್ಯಾಲಯದ ಆಡಳಿತವನ್ನೂ ಮುಕ್ತಕಂಠದಿಂದ ಹೊಗಳಿದ್ದಾನೆ. "ಗವಾನನು ದಿನಕ್ಕೆ ಎರಡೆ ರೂಪಾಯಿ ವೆಚ್ಚದಿಂದ ಬದುಕು ಸಾಗಿಸಿದನು ಚಾಪೆಯ ಮೇಲೆ ನಿದ್ರೆ, ಕುಡಿಯಲು ತಿನ್ನಲು ಮಣ್ಣಿನ ಪಾತ್ರೆ. ಬೀದರನಲ್ಲಿ ಒಂದು ವಿದ್ಯಾಪೀಠವನ್ನು ಕಟ್ಟಿ ಅಲ್ಲಿ ಬಡ ವಿದ್ಯಾರ್ಥಿಗಳಿಗೆ ಊಟ, ಬಟ್ಟೆ, ವಸತಿ ಸೌಲಭ್ಯಗಳನ್ನು ಕಲ್ಪಿಸಲು ತನ್ನ ಸಂಪತ್ತೆಲ್ಲವನೂ ವಿನಿಯೋಗಿಸಿದನು". ಆದರೆ ರಾಜ್ಯದಲ್ಲಿ ಅವನ ಸ್ಥಾನ ಕಾಗೆಗಳ ಮಧ್ಯೆ ಕೋಗಿಲೆಗಿದ್ದ ಸ್ಥಾನವಾಗಿತ್ತು. ಕಳ್ಳತನ, ಭಷ್ಟಾಚಾರ, ದರೋಡೆ ಮುಂತಾದ ದುಷ್ಟಶಕ್ತಿಗಳನ್ನು ಸೈನಿಕ ಶಕ್ತಿಯ ಮೂಲಕ ಹೊಡೆದೋಡಿಸಲು ಹೋಗಿ ಅವನು ದಖ್ಖನಿನ ಪಕ್ಷದವರ ಕ್ರೋಧಕ್ಕೆ ಬಲಿಯಾದನು.

ವಿರೋಧ ಪಕ್ಷದವರು ಗವಾನನ ಉತ್ಕರ್ಷವನ್ನು ಕಂಡು ಅಸೂಯೆಪಟ್ಟುಕೊಂಡರು. ಅವನನ್ನು ನಿರ್ನಾಮಮಾಡಲು ಒಳಸಂಚು ನಡೆಸಿದರು. ಅವರು ಖಾಲಿ ಕಾಗದವೊಂದಕ್ಕೆ ಗವಾನನ ಮುದ್ರೆಯನ್ನು ಒತ್ತಿ, ಅವನೇ ಒರಿಸ್ಸಾದ ರಾಜನಿಗೆ ಒಂದು ಪತ್ರವನ್ನು ಬರೆದಂತೆ ಮಾಡಿ, ಆ ಪತ್ರವನ್ನು ಸುಲ್ತಾನನಿಗೆ ಒಪ್ಪಿಸಿದರು. ಆ ಪತ್ರದಲ್ಲಿ ಗವಾನನು ರಾಜದ್ರೋಹಿ ಎಂಬುದನ್ನು ಎತ್ತಿತೋರಿಸಲಾಗಿತ್ತು. ಸುಲ್ತಾನನು ಹಿಂದೆ ಮುಂದೆ ಯೋಜಿಸದೆ ಗವಾನನನ್ನು ಕರೆತರುವಂತೆ ಹೇಳಿಕಳುಹಿಸಿದನು. ನಿರ್ದೋಷಿಯಾದ ಗವಾನನು ರಾಜಾಸ್ಥಾನಕ್ಕೆ ಬಂದನು. ರಾಜದ್ರೋಹಿಗೆ ಏನು ಶಿಕ್ಷೆ ವಿಧಿಸಬಹುದೆಂದು ಸುಲ್ತಾನನು ಗವಾನನನ್ನು ಕೇಳಿದನು. "ಮರಣದಂಡನೆ" ಎಂದು ಉತ್ತರ ಬಂದಿತು. "ಹಾಗಾದರೆ ನಿನ್ನ ಶಿಕ್ಷೆಯನ್ನು ನೀನೇ ವಿಧಿಸಿಕೊಂಡಿಕರುವೆ" ಎಂದು ಸುಲ್ತಾನನು ಆ ಪತ್ರವನ್ನು ತೋರಿಸಿದನು. ತಾನು ನಿರಪರಾಧಿಯೆಂದು ಎಷ್ಟು ಹೇಳಿದರು ಸುಲ್ತಾನನು ಕೇಳದೆ ಅವನ ರುಂಡವನ್ನು ಕತ್ತರಿಸಿಸುವಂತೆ ಆಜ್ಞೆ ಮಾಡಿದನು. ಹೇಳಿದುದೇ ತಡ ಗವಾನನ ರುಂಡ ನೆಲಕ್ಕುರಳಿತು. ಈ ದುರುಂತ ೧೪೮೧ ರಲ್ಲಿ ನಡೆಯಿತು. "ಬೆಲಿದಾನದ ಭಾಗ್ಯಕ್ಕಾಗಿ ಭಗವಂತನಿಗೆ ಮಣಿದೆ" ಎಂಬುದು ಅವನ ಕೊನೆಯ ನುಡಿಯಾಗಿತ್ತು. ಅದರ ನಿಜಸ್ಥಿತಿಯು ಬಯಲದಾಗ ಸುಲ್ತಾನನಿಗೆ ಬುದ್ಧಿ ಭ್ರಮಣೆಯಾಯಿತು. ಸುಲ್ತಾನನು ೧೪೨೮ನೇ ಮಾರ್ಚ್ ೨೨ ರಂದು ಬೀದರನಲ್ಲಿ "ಮಹಮ್ಮದ್ ಗವಾನನು ನನ್ನನ್ನು ಕೊಲ್ಲುತ್ತಿರುವನೆಂದು" ಕಿರುಚುತ್ತಾ ಹೊರಳಾಡುತ್ತಾ ಪ್ರಾಣ ಬಿಟ್ಟನು.

**ಗವಾನನ ವ್ಯಕ್ತಿತ್ವ :**

ಮಹಮದ್ ಗವಾನನ ವ್ಯಕ್ತಿತ್ವವು ಬಹಮನಿ ಮತ್ತು ಕರ್ನಾಟಕದ ಚರಿತ್ರೆಯಲ್ಲಿ ಸ್ಮರಣೀಯವಾಗಿದೆ. ಈತನು ಸ್ವಸಾಮರ್ಥ್ಯ ಮತ್ತು ಚತುರತೆಯಿಂದ ಬಹಮನಿ ರಾಜ್ಯದ ಪ್ರಧಾನಮಂತ್ರಿಯಾಗಿ ಅನೇಕ ಸಾಧನೆಗಳನ್ನು ಮಾಡಿದ್ದಾನೆ. ಪ್ರಧಾನ ಮಂತ್ರಿಯಾಗಿ ಅಧಿಕಾರ ವಹಿಸಿಕೊಂಡ ಮೇಲೆ ಅನೇಕ ವಿಜಯಗಳನ್ನು ಸಾಧಿಸಿ ತನ್ನ ರಾಜ್ಯದ ಮೇರೆಗಳನ್ನು ವಿಸ್ತರಿಸಿದನು. ಈ ವಿಜಯಗಳು ಇವನ ಶಕ್ತಿ ಸಾಮರ್ಥ್ಯದ ಧ್ಯೋತಕಗಳಾಗಿವೆ. ವೀರಯೋಧನಾದ ಇವನು ದಕ್ಷ ಮತ್ತು ಮುತ್ಸದ್ದಿ ರಾಜಕಾರಣಿಯಾಗಿ ರಾಜ್ಯದ ಆಡಳಿತ ಮತ್ತು ಆರ್ಥಿಕ ವ್ಯವಸ್ಥೆಯಲ್ಲಿ ಗಣನೀಯ ಪ್ರಗತಿಯನ್ನು ಸಾಧಿಸಿದನು. ಗವಾನನು ಮಹಾನ್ ಪಂಡಿತನು, ವಿದ್ವನ್ಮಣಿಯು ಆಗಿದ್ದನು. ಶಿಕ್ಷಣ ಪ್ರೇಮಿಯಾಗಿದ್ದನೆಂಬುದಕ್ಕೆ ಅವನ ಮದರಸಾ–ಎ–ಮಹಮೂದ್ ಗವಾನ್ ಎಂಬ ಕಟ್ಟಡವು ಮೂಕ ಸಾಕ್ಷಿಯಾಗಿ ಬೀದರ ನಗರದದ ಮಧ್ಯದಲ್ಲಿ ಇಂದಿಗೂ ಪ್ರವಾಸಿಗರನ್ನು ಆಕರ್ಷಿಸುತ್ತದೆ. ಗವಾನನು ಗಣಿತ, ಭೂಗೋಳ, ಭಾಷಾಶಾಸ್ತ್ರ, ವೈದ್ಯಕೀಯ ಮುಂತಾದ ಅನೇಕ ವಿಷಯಗಳಲ್ಲಿ ಅಪಾರ ಅನುಭವ ಮತ್ತು ಪಾಂಡಿತ್ಯವನ್ನು ಹೊಂದಿದ್ದನಲ್ಲದೆ ತನ್ನದೆ ಆದ ಬೃಹತ್ ಗ್ರಂಥಾಲಯವನ್ನು ಹೊಂದಿದ್ದನು. ಇವನು 'ದಿವಾನ್–ಐ–ಆಶ್ರಾ' ಮತ್ತು 'ರಜತ್‌ಉಲ್‌ಇನ್ಸಾವ' ಎಂಬ ಕೃತಿಗಳನ್ನು ಬರೆದಿದ್ದಾನೆ.

ಒಟ್ಟಿನಲ್ಲಿ ಗವಾನನು ಶ್ರೇಷ್ಠ ಪ್ರಧಾನಿ, ರಾಜನೀತಿಚತುರ, ಪರಾಕ್ರಮಿ, ದಂಡನಾಯಕ, ವಿದ್ವಾಂಸ, ಆಡಳಿತಗಾರ, ನಿಸ್ವಾರ್ಥಿ, ಸರಳಜೀವಿ, ಸ್ವಾಮಿಭಕ್ತ ಮತ್ತು ಆದರ್ಶಮಯಿಯಾಗಿದ್ದನು. ಆದರೆ

ಇವನಲ್ಲಿದ್ದುದು ಒಂದೇ ಒಂದು ದೋಷ. ಇವನು ಇಸ್ಲಾಂ ಧರ್ಮಾಚರಣೆಯಲ್ಲಿ ನಿಷ್ಠಾವಂತನಾಗಿದ್ದುದರಿಂದ ಪರಮತಸಹಿಷ್ಣುವಾಗಿರಲಿಲ್ಲ. ಒಳ್ಳೆಯ ಹೆಣ್ಣಿಗೆ ಕಣ್ಣು ಕುರುಡ. ಆದರೂ ಕೂಡ ಗವಾನನು ದಕ್ಷಿಣ ಚರಿತ್ರೆಯ ನಭೋಮಂಡಲದಲ್ಲಿ ಧ್ರುವತಾರೆಯಾಗಿ ಬೆಳಗುತ್ತಿದ್ದಾನೆ.

ಮಹಮ್ಮದ್‌ಷಹನ ಮರಣಾನಂತರ ಬಹಮನಿ ರಾಜ್ಯವು ಅವನತಿಯ ಹಾರಿಯನ್ನು ಹಿಡಿಯಿತು. ಅವನ ಉತ್ತರಾಧಿಕಾರಿಯಾಗಿ ಬಂದ ನಾಲ್ಕನೆಯ ಮಹಮ್ಮೂದ್‌ಷಹನು (೧೪೮೨-೧೫೧೮) ಇನ್ನೂ ಹುಡುಗನಾಗಿದ್ದನು. ರಾಜ್ಯಾಡಳಿತವನ್ನು ಮಂತ್ರಿಯಾದ ಅಮೀರ್ ಬರೀದನು ನೋಡಿಕೊಳ್ಳುತ್ತಿದ್ದನು. ಸುಲ್ತಾನನು ಸುಖ ಸುಪ್ಪತ್ತಿಗೆಯಲ್ಲಿ ಓಲಾಡತೊಡಗಿದನು. ರಾಜ್ಯದ ಸ್ಥಿತಿ ಅಧೋಗತಿಗಿಳಿಯಿತು. ರಾಜ್ಯದ ಅನೇಕ ಭಾಗಗಳಲ್ಲಿ ಪ್ರಜೆಗಳು ದಂಗೆಯೆದ್ದರು. ರಾಜ್ಯವು ದುಷ್ಪಶಕ್ತಿಗಳ ಬಿರುಗಾಳಿಗೆ ಸಿಕ್ಕಿ ಕೊಚ್ಚಿಕೊಂಡು ಹೋಗುತ್ತಿದ್ದ ಸಮಯದಲ್ಲಿ ಸುಲ್ತಾನನು ತೀರಿಕೊಂಡನು. ಆನಂತರ ಅಹಮ್ಮದ್‌ಷಹ, ವಲೀವುಲ್ಲಾ ಮತ್ತು ಕಲೀವುಲ್ಲಾ ಬಹಮನಿ ಪಟ್ಟಕ್ಕೆ ಬಂದರು. ಇವನ ಕಾಲದಲ್ಲಿ ರಾಜಕೀಯ ಪರಿಸ್ಥಿತಿಯು ಇನ್ನೂ ಹದಗೆಟ್ಟಿಕತು. ಬಹಮನಿ ರಾಜ್ಯವು ಅಶಾಂತಿ, ಅವ್ಯವಸ್ಥೆಯ ಬೀಡಾಯಿತು.

**ಬಹಮನಿ ರಾಜ್ಯದ ಪತನ :**

ಮಹಮೂದ್ ಗವಾನನ ಮರಣ ದಂಡನೆಯ ತಪ್ಪಿನ ಅರಿವಿನಿಂದ ಚಿಂತೆಗೀಡಾಗಿ ಮೂರನೆಯ ಮಹಮ್ಮದ್‌ಷಹನು ಕ್ರಿ.ಶ ೧೪೮೨ ರಲ್ಲಿ ಮರಣವನ್ನಪ್ಪಿದನು. ಇವನ ಮರಣಾನಂತರ ಅವನ ಅಲ್ಪ ವಯಸ್ಸಿನ ಮಗ ಮಹಮೂದನು ಸಲ್ತಾನನಾದನು. ಗವಾನನ ಮರಣದಿಂದ ಅನೇಕ ದಕ್ಷ ಪ್ರತಿಭಾವಂತ ಪರದೇಶಿ ಮುಸ್ಲಿಮರು ಅಧಿಕಾರ ತ್ಯಜಿಸಿದರು. ದಖ್ಖನಿಗಳ ಅರಾಜಕತೆ ಹೆಚ್ಚಾಯಿತು. ಕೇಂದ್ರ ಸರಕಾರವು ದುರ್ಬಲವಾಗಿ ರಾಜ್ಯದಲ್ಲಿ ಶಾಂತಿ, ಕೊಲೆ ಸುಲಿಗೆಗಳು ಸಾಮಾನ್ಯವಾದವು. ಸುಲ್ತಾನ್ ಮಹಮೂದನು ಅಳಿವಿನ ಅಂಚಿನಲ್ಲದ್ದ ತನ್ನ ರಾಜ್ಯವನ್ನು ರಕ್ಷಿಸುವಲ್ಲಿ ವಿಫಲನಾದನು. ಸುಲ್ತಾನನ ದುರ್ಬಲತೆಯನ್ನರಿತ ಅನೇಕ ತರಫ್‌ದಾರರು ಸ್ವತಂತ್ರರಾಗಲು ಪ್ರಯತ್ನಿಸಿದರು. ಕ್ರಿ.ಶ ೧೪೯೮ ರಲ್ಲಿ ಯುಸುಫ್ ಆದಿಲ್‌ಶಹನು ಬಿಜಾಪುರದಲ್ಲಿ, ಕ್ರಿ.ಶ ೧೪೯೦ ರಲ್ಲಿ ನಿಜಾಮ್ ಉಲ್‌ಮುಲ್ಕನು ಅಹಮ್ಮದ್‌ನಗರದಲ್ಲಿ, ಕ್ರಿ.ಶ ೧೪೯೦ ರಲ್ಲಿ ಕುತುಬ್‌ಶಹನು ಗೋಲ್ಕುಂಡಾ ಬಹಮನಿ ರಾಜ್ಯದಿಂದ ಸಿಡಿದು ಸ್ವತಂತ್ರ ರಾಜ್ಯಗಳನ್ನು ಸ್ಥಾಪಿಸಿದರು. ಈ ರೀತಿಯ ರಾಜಕೀಯ ಬೆಳೆವಣಿಗೆಗಳು ಬಹಮನಿ ರಾಜ್ಯವನ್ನು ಒಡೆದು ಛಿದ್ರ ಮಾಡಿದವು. ಮಹಮದ್‌ಶಹನು ಕ್ರಿ.ಶ ೧೫೧೮ ರಲ್ಲಿ ಮಾಡಿದ ಆನಂತರ ಅಹಮ್ಮದ್‌ಶಹಾ, ಅಲ್ಲಾಉದ್ದೀನ್‌ಶಹಾ ಮತ್ತು ವಲೀವುಲ್ಲಾ ಎಂಬ ಸುಲ್ತಾನರು ಬಹಮನಿ ರಾಜ್ಯವನ್ನು ಅಳಿದರು. ಕಲೀಮುಲ್ಲಾನು ಬಹಮನಿ ಸಂತತಿಯ ಕೊನೆಯ ಸುಲ್ತಾನನಾಗಿದ್ದನು. ಇತನ ಕಾಲದಲ್ಲಿ ಅವನ ಪ್ರಧಾನಮಂತ್ರಿ ಅಮೀರ್ ಬರೀದ್‌ನು ಬೀದರದಲ್ಲಿ ಬರೀದ್‌ಶಾಹಿ ಮನೆತನವನ್ನು ಕ್ರಿ.ಶ ೧೫೨೭ ರಲ್ಲಿ ಪ್ರಾರಂಭಿಸಿದನು. ಈ ರೀತಿಯಾಗಿ ಬಹಮನಿ ರಾಜ್ಯದ ಸಮಾಧಿಯ ಮೇಲೆ ೫ ಶಾಹಿ ರಾಜ್ಯಗಳು ಉದಯಿಸಿದವು.

# ಬಹಮನಿ ರಾಜ ಮನೆತನದ ವಂಶಾವಳಿ



# ಬಹಮನಿ ಸುಲ್ತಾನರ ಪಟ್ಟಿ

| | |
|---|---|
| ೧ ಒಂದನೆ ಅಲ್ಲಾವುದ್ದೀನ ಬಹಮನಷಾ | ಕ್ರಿ.ಶ ೧೩೪೭-೧೩೫೮ |
| ೨ ಒಂದನೆ ಮಹಮದ್‌ಷಾ | ಕ್ರಿ.ಶ ೧೩೫೮-೧೩೭೫ |
| ೩ ಮುಜಾಹಿದ್ | ಕ್ರಿ.ಶ ೧೩೭೫-೧೩೭೮ |
| ೪ ದಾವುದ್ | ಕ್ರಿ.ಶ ೧೩೭೮ |
| ೫ ಒಂದನೆ ಮಹಮೂದ್ | ಕ್ರಿ.ಶ ೧೩೭೮-೧೩೯೭ |
| ೬ ಘಿಯಾಸುದ್ದೀನ್ | ಕ್ರಿ.ಶ ೧೩೯೭ |
| ೭ ಶಂಸುದ್ದೀನ್ | ಕ್ರಿ.ಶ ೧೩೯೭ |
| ೮ ಫಿರೋಜ್ | ಕ್ರಿ.ಶ ೧೩೯೭-೧೪೨೨ |
| ೯ ಒಂದನೆ ಅಹಮದ್‌ಷಾ | ಕ್ರಿ.ಶ ೧೪೨೨-೧೪೩೬ |
| ೧೦ ಎರಡನೆ ಅಲ್ಲಾವುದ್ದೀನ್ | ಕ್ರಿ. ಶ ೧೪೩೬-೧೪೫೮ |
| ೧೧ ಹುಮಾಯೂನ್ | ಕ್ರಿ.ಶ ೧೪೫೮-೧೪೬೧ |
| ೧೨ ನಿಜಾಮೂದಿನ್ ಅಹಮದ್ | ಕ್ರಿ.ಶ ೧೪೬೧-೧೪೬೩ |
| ೧೩ ಮೂರನೆ ಮಹಮದ್ ಷಾ | ಕ್ರಿ.ಶ ೧೪೬೩-೧೪೮೨ |
| ೧೪ ಎರಡನೆ ಮಹಮೂದ್ | ಕ್ರಿ.ಶ ೧೪೮೨-೧೫೧೮ |
| ೧೫ ನಾಲ್ಕನೆ ಅಹಮದ್‌ಷಾ | ಕ್ರಿ.ಶ ೧೫೧೮-೧೫೨೦ |
| ೧೬ ಮೂರನೆ ಅಲ್ಲಾವುದ್ದೀನ್ | ಕ್ರಿ.ಶ ೧೫೨೦-೧೫೨೩ |
| ೧೭ ವಾಲಿಯುಲ್ಲಾ | ಕ್ರಿ.ಶ ೧೫೨೩-೧೫೨೬ |
| ೧೮ ಕಲೀಮ್‌ಉಲ್ಲಾ | ಕ್ರಿ.ಶ ೧೫೨೬-೧೫೨೮ |

# ಅಡಿಟಿಪ್ಪಣಿಗಳು

೧ ಬಹಮನಿ ಕಿಂಗ್‌ಡಮ್.ಕಾಮ್: ೨೦೦೯ ಜುಲೈ ೩೦ ಪುಟ-೧೬.

೨ ಪಾಟೀಲ್ ಎಂ.ಬಿ (ಸಂ): ಗುಲಬರ್ಗಾ ಜಿಲ್ಲೆ ಗ್ಯಾಸಿಟಿಯರ್ ೧೯೯೭ ಪುಟ-೬೨

೩ ನೀಲಕಂಠಶಾಸ್ತ್ರಿ ಕೆ.ಎ: ಎ ಹಿಸ್ಟರಿ ಆಫ್‌ಸೌತ್ ಇಂಡಿಯ ೧೯೭೬ ಪಟ-೨೪೨

೪ ಶಿವರುದ್ರಸ್ವಾಮಿ ಎಸ್.ಎನ್: ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ ೨೦೦೬ ಪುಟ-೨೯೫

೫ ಪಾಟೀಲ್ ಎಂ.ಬಿ (ಸಂ): ಗುಲಬರ್ಗಾ ಜಿಲ್ಲೆ ಗ್ಯಾಸಿಟಿಯರ್ ೧೯೯೭ ಪುಟ-೬೩

೬ ಅದೇ ಪುಟ-೬೪

೭ ಚೋಪ್ರಾ ಎನ್.ಪಿ : ಹಿಸ್ಟರಿ ಆಫ್‌ಸೌತ್ ಇಂಡಿಯ ಪಟ-೬೯

೮ ಸದಾಶಿವ ಕೆ: ಮಧ್ಯಯುಗಿನ ಭಾರತದ ಇತಿಹಾಸ ೨೦೦೪ ಪುಟ-೫೧೫

೯ ಶಿವರುದ್ರಸ್ವಾಮಿ ಎಸ್.ಎನ್ : ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ ೨೦೦೬ ಪುಟ-೩೦೧

೧೦ ನೀಲಕಂಠಶಾಸ್ತ್ರಿ ಕೆ.ಎ : ಎ ಹಿಸ್ಟರಿ ಆಫ್‌ಸೌತ್ ಇಂಡಿಯ ೧೯೭೬ ಪುಟ-೨೫೪

# ಅಧ್ಯಾಯ-೪

## ಬಹಮನಿ ಕಾಳಗಗಳಿಗೆ ಪ್ರೇರಕವಾದ ಅಂಶಗಳು

ಬಹಮನಿ ಮನೆತನವು ಸ್ಥಾಪನೆಯಾದ ನಂತರ ಸುಲ್ತಾನರು ಇತರ ರಾಜ್ಯಗಳೊಂದಿಗೆ ಹೋರಾಟದಲ್ಲಿ ನಿರತರಾದರು. ಅವರು ಹೋರಾಟ ಕೈಗೊಳ್ಳಲಿಕೆ ಪ್ರೇರಕವಾದ ಅಂಶಗಳನ್ನು ಈ ಅಧ್ಯಾಯದಲ್ಲಿ ಕೆಳಗಿನಂತೆ ವಿವರಿಸಲಾಗಿದೆ.

೧ ದಖ್ಖಿನನಲ್ಲಿ ಮುಸ್ಲಿಂ ರಾಜ್ಯ ಸ್ಥಾಪಿಸುವುದು :

ಉತ್ತರ ಭಾರತದಲ್ಲಿ ಮುಸ್ಲಿಂ ರಾಜ್ಯ ಸ್ಥಾಪನೆಯಿಂದ ಸಹಜವಾಗಿಯೆ ಅವರು ದಕ್ಷಿಣದ ಪ್ರದೇಶಗಳ ಕಡೆಗೆ ಆಕರ್ಷಿತರಾದರು. ದಕ್ಷಿಣದಲ್ಲಿ ಅಂದಿನ ರಾಜಕೀಯ ಪರಿಸ್ಥಿತಿಯು ಗೊಂದಲದಿಂದ ಕೂಡಿದು ಹಾಗೂ ಅನೇಕ ಸಣ್ಣ ಪುಟ್ಟ ರಾಜಮನೆತನಗಳು ಆಳುತ್ತಿದ್ದವು. ಅವರಲ್ಲಿ ಐಕ್ಯತೆಯ ಭಾವನೆ ಹೊಂದಿರಲಿಲ್ಲ. ಈ ಪರಿಸ್ಥಿತಿಯ ಲಾಭವನ್ನು ಪಡೆದ ಅಲ್ಲಾವುದ್ದೀನ್ ಖಿಲ್ಜಿಯು ದಕ್ಷಿಣದ ಕಡೆಗೆ ದಂಡೆಯಾತ್ರೆ ಕೈಗೊಂಡನು. ತನ್ನ ಸೇನಾನಿ ಮಲ್ಲಿಕ್ ಕಾಫೂರ್‌ನ ನೇತೃತ್ವದಲ್ಲಿ ಅಪಾರ ಸಂಪತ್ತನ್ನು ದೋಚಿದನು. ಅವನ ದಾಳಿಯ ಉದ್ದೇಶ ಕೇವಲ ಸಂಪತ್ತಿನ ಲೂಟಿ ಮಾಡುವುದಾಗಿತ್ತು. ಆದರೆ ಇವನ ದಾಳಿಯಿಂದ ಅನೇಕ ಮುಸ್ಲಿಂ ನಾಯಕರು ದಖ್ಖನ್ನನ ಪ್ರದೇಶದಲ್ಲಿ ಬಂದು ನೆಲಸಿದರು. ಹಾಗು ತಮ್ಮ ಸಾರ್ವಭೌಮತ್ವಕ್ಕಾಗಿ ಸ್ವತಂತ್ರವಾಗಲು ಪ್ರಯತ್ನಿಸಿದರು. ಮಹಮದ ಬಿನ್ನ ತುಘಲಕನ ಕಾಲದಲ್ಲಿ ನಡೆದ ಅನೇಕ ದಂಗೆಗಳಿಂದ ಹಾಗೂ ಅವನ ಹುಚ್ಚು ಕ್ರಮಗಳಿಂದ ಜನ ಬೇಸತ್ತು ಹೋದರು. ಸುಲ್ತಾನನ ಸ್ವೇಚ್ಛಾ ಪ್ರವೃತ್ತಿ ಹಾಗು ಕೌರ್ಯ ಹೆಚ್ಚಾದಂತೆ ದಂಗೆ ಪರಿಸ್ಥಿತಿಗಳು ದ್ವಿಗುಣಗೊಂಡವು. ದೌಲತಾಬಾದ್, ಗುಜುರಾತ್, ಗುಲಬರ್ಗಾಗಳಲ್ಲಿ ದಂಗೆಗಳಾದವು. ದಂಗೆಯನ್ನು

ಹತ್ತಿಕಲು ತುಘಲಕ ವಿಫಲನಾದನು. ಇದರಿಂದ ಪ್ರೇರಿತಗೊಂಡ ಹಸನ್ನ ಗಂಗು ದೌಲತಬಾದ್‌ನ ತುಘಲಕನ ಸೇನಾಧಿಕಾರಿಯನ್ನು ಸೋಲಿಸಿ ಸ್ವಾತಂತ್ರ್ಯವನ್ನು ಘೋಷಿಸಿಕೊಂಡು. ತನ್ನ ರಾಜ್ಯಧಾನಿಯನ್ನು ದೌಲತಾಬಾದನಿಂದ ಗುಲಬರ್ಗಾಕ್ಕೆ ವರ್ಗಾಯಿಸಿದ. ತದನಂತರ ಕ್ರಿ.ಶ ೧೩೪೭ ಆಗಸ್ಟ್ ೩ ರಂದು ಅಧಿಕಾರ ವಹಿಸಿಕೊಂಡನು.

ದಕ್ಷಿಣ ಪ್ರದೇಶವು ಉತ್ತರ ಭಾರತಕ್ಕೆ ಹೋಲಿಸಿದರೆ ಶಾಂತ ರೀತಿಯಿಂದ ಕೂಡಿತ್ತು. ಏಕೆಂದರೆ ಉತ್ತರದಲ್ಲಿ ಪದೆ ಪದೆ ನಡೆಯುತಿದ್ದ ವಿದೇಶಿಯರ ದಾಳಿಯಿಂದ ತತ್ತರಿಸಿ ಹೋಗಿತ್ತು. ದಕ್ಷಿಣ ಭಾರತವು ಶಾಂತ ರೀತಿಯಿಂದ ಕೂಡಿದ್ದು ಹಾಗೂ ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹಿಂದು ರಾಜಮನೆತನಗಳು ಅಸ್ಥಿತ್ವದಲ್ಲಿದ್ದವು. ಬಹಮನಿ ಸುಲ್ತಾನರು ಕೇವಲ ಸಾಮ್ರಾಜ್ಯ ವಿಸ್ತರಿಸುವುದು ಮಾತ್ರವಲ್ಲದೆ ತಮ್ಮ ಇಸ್ಲಾಂ ಧರ್ಮ ಸಂಸ್ಕೃತಿಯನ್ನು ಹರಡಿಸುವ ಉದ್ದೇಶವನ್ನು ಸಹ ಹೊಂದಿದರು. ಸ್ಥಳಿಯ ಹಿಂದು ಸಂಸ್ಕೃತಿಯನ್ನು ಸಾವಿರಾರು ವರ್ಷಗಳಿಂದ ಉಳಿಸಿ ಬೆಳಿಸಿಕೊಂಡು ಬಂದ ಜನ ಸಾಮಾನ್ಯರು ಹಾಗೂ ಅರಸರು ಅನ್ಯ ಸಂಸ್ಕೃತಿಯನ್ನು ಒಪ್ಪದೆಹೋದರು. ಅವರು ಬೇರೆ ಧರ್ಮ ಸಂಸ್ಕೃತಿಯ ವಿರುದ್ಧ ಹೋರಾಟಕ್ಕೆ ನಿಂತರು. ಇದರಿಂದ ಬಹಮನಿಯ ಅರಸರು ಸ್ಥಳಿಯರ ಮೇಲೆ ತಮ್ಮ ಸೇನಾ ಬಲದ ಮೂಲಕ ಇಲ್ಲಿಯ ಅನೇಕ ಸ್ಥಳಿಯರೋಂದಿಗೆ ಹೋರಾಡಬೇಕಾಯಿತು. ಬಹಮನಿ ಅರಸರು ತಮ್ಮ ಅಸ್ಥಿತ್ವಕ್ಕಾಗಿ ಹಾಗು ತಮ್ಮ ಸಂಸ್ಕೃತಿಯ ಉಳಿವಿಗಾಗಿ ಸದಾ ಹೋರಾಡಬೇಕಾಗುತ್ತಿತ್ತು. ಇದರ ವಿರುದ್ದ ಸ್ಥಳಿಯ ಅನ್ಯ ದೇಶಿಯರನ್ನು ಬೇರೆ ದೇಶದಿಂದ ಬಂದವರು ಇವರನ್ನು ಹೊರ ಹಾಕಲು ಪ್ರಯತ್ನಿಸುತ್ತಿದ್ದರು. ಈ ಕಾರಣದಿಂದಲೆ ಬಹಮನಿ ಸುಲ್ತಾನರು ನಿರಂತರ ಹೋರಾಟ ನಡೆಸಬೇಕಾಯಿತು.

**೨ ಸಾಮ್ರಾಜ್ಯದ ವಿಸ್ತರಣೆ :**

ಕ್ರಿ.ಶ ೧೩೪೭ ರಲ್ಲಿ ಸ್ಥಾಪನೆಯಾದ ಬಹಮನಿ ರಾಜ್ಯವು ಕೇವಲ ಗುಲಬರ್ಗಾ ಮತ್ತು ಅದರ ಸುತ್ತಲಿನ ಪ್ರದೇಶಕ್ಕೆ ಮಾತ್ರ ಸೀಮಿತವಾಗಿತ್ತು. ಬಹಮನಿ ಸುಲ್ತಾನರು ಅಧಿಕಾರದ ವಿಸ್ತರಣೆಯ ಮಹತ್ವಾಕಾಂಕ್ಷಿಗಳಾಗಿದ್ದರು. ಸಾಮ್ರಾಜ್ಯದ ವಿಸ್ತರಣೆಗಾಗಿ ನಿರಂತರ ಹೋರಾಟ ನಡೆಸಿದರು. ಬಹಮನಿ ಸಾಮ್ರಾಜ್ಯದ ಸುತ್ತಲು ಸ್ಥಳಿಯ ಹಿಂದೂ ರಾಜ ಮನೆತನಗಳು ಅಸ್ಥಿತ್ವದಲ್ಲಿದ್ದವು. ಬಹಮನಿ ಸುಲ್ತಾನರು ಸಾಮ್ರಾಜ್ಯದ ವಿಸ್ತರಣೆಯ ಸಲುವಾಗಿ ಪ್ರಾರಂಭದಲ್ಲಿ ಕೊಂಕಣ ಪ್ರದೇಶ. ವಿಜಯ ನಗರದ ದೋಅಬ್ ಪ್ರದೇಶ ಪೂರ್ವ ರಾಜ್ಯಗಳಾದ ತೇಲಂಗಾಣ ಪ್ರದೇಶ ಉತ್ತರದ ದೆಹಲಿ ಸುಲ್ತಾನರ ಪ್ರದೇಶಗಳ ಮೇಲೆ ನಿರಂತರ ಹೋರಾಟಮಾಡುವ ಮೂಲಕ ಸಾಮ್ರಾಜ್ಯವನ್ನು ವಿಸ್ತರಿಸಿದರು.

ವಾಣಿಜ್ಯ ದೃಷ್ಟಿಯಿಂದ ಕೊಂಕಣ ಪ್ರದೇಶವು ವಶಪಡಿಸಿಕೊಳ್ಳುವುದು ಅವಶ್ಯಕವಾಗಿತ್ತು. ವಾರಂಗಲನ ಗೋಲ್ಕೊಂಡಾ ಪ್ರದೇಶವು ವಜ್ರದ ಗಣಿಗೆ ಪ್ರಸಿದ್ದವಾಗಿತ್ತು. ವಿಜಯನಗರ ಹಾಗೂ ಬಹಮನಿ ಮಧ್ಯ ಇದ್ದ ಕೃಷ್ಣಾ ಹಾಗು ತುಂಗಭದ್ರ ಗೋದಾವರಿ ನದಿಗಳ ನಡುವಣ ಪ್ರದೇಶ ವಿಫುಲ ಫಲವತ್ತಾಗಿದ್ದು ಇಲ್ಲಿ ತಮ್ಮ ಅಧಿಪಾತ್ಯವನ್ನು ಸ್ಥಾಪಿಸಿ ಸಾಮ್ರಾಜ್ಯ ವಿಸ್ತರಿಸುವುದು ಬಹಮನಿ ಸುಲ್ತಾನರ

ಧ್ಯೆಯವಾಗಿತ್ತು. ಅವರು ಹೊಂದಿದ ಸಾಮ್ರಾಜ್ಯ ವಿಸ್ತಾರಣಾ ನೀತಿಯು ಕಾಳಗಗಳಿಗೆ ಪ್ರಮುಖ ಕಾರಣವಾಯಿತು.

**೩ ದೋಅಬ್ ಪ್ರದೇಶಕ್ಕಾಗಿ ಹೋರಾಟ :**

ಬಹಮನಿ ಸಾಮ್ರಾಜ್ಯಕ್ಕೂ ಮತ್ತು ವಿಜಯನಗರ ಸಾಮ್ರಾಜ್ಯ ನಿರಂತರವಾಗಿ ಯುದ್ಧಗಳು ಸಂಭವಿಸುವದಕ್ಕೆ ದೋಅಬ್ ಪ್ರದೇಶ ಪ್ರಮುಖ ಕಾರಣವಾಗಿತ್ತು. ಇದು ಕೃಷ್ಣಾ ಮತ್ತು ತುಂಗಭದ್ರ ನದಿಗಳ ನಡುವಿನ ಫಲವತ್ತಾದ ಭೂ ಪ್ರದೇಶದ ಹೊಂದಿತ್ತು. ಈ ಪ್ರದೇಶವು ಕೃಷ್ಣ ಮತ್ತು ತುಂಗ ಭದ್ರ ನದಿಗಳ ಸಂಗಮದ ಪಶ್ಚಿಮಕ್ಕಿರುವ ತ್ರಿಕೋಣಾಕೃತಿಯ ವಿಶಾಲವಾದ ಪ್ರದೇಶದಲ್ಲಿ ರಾಯಚೂರು, ಮುದಗಲ್, ಅದೋನಿ, ಬಂಕಾಪುರ ಮುಂತಾದ ಮಹತ್ವದಾದ ಪಟ್ಟಣಗಳಿಂದ ಕೂಡಿತ್ತು. ಈ ಎರಡು ರಾಜ್ಯಗಳ ನಿರಂತರ ಯುದ್ಧಕ್ಕೆ ಪ್ರಮುಖ ಕಾರಣ ನಾವು ಹುಡುಕಲು ಬಯಸಿದಾಗ: ಆರ್ಥಿಕ ಕಾರಣಗಳೇ ಪ್ರಮುಖವೆಂದೆನಿಸುತ್ತವೆ. ಈ ಪ್ರದೇಶಕ್ಕಾಗಿ ಹಿಂದಿನಿಂದಲು ಅನೇಕ ಯುದ್ಧಗಳು ಸಂಭವಿಸಿದವು. ಉದಾ : ಚಾಲುಕ್ಯ ಮತ್ತು ಚೋಳರ ನಡುವೆ ಈ ಪ್ರದೇಶ ಯುದ್ಧಕ್ಕೆ ಮುಖ್ಯ ಕಾರಣವಾಗಿತ್ತು. ನಂತರ ಹೊಯ್ಸಳರೂ ಮತ್ತು ಯಾದವರೂ ಸಹ ಇದಕ್ಕಾಗಿ ಹೋರಾಟ ನಡೆಸಿದರು. ಬಹಮನಿ ಹಾಗೂ ವಿಜಯನಗರಗಳ ಕಾಲದಲ್ಲಿ ಇತಿಹಾಸ ಪುನರಾವರ್ತನೆಯಾದದನ್ನು ಗಮನಿಸಿದ್ದಾಗ ಈ ಎರಡು ರಾಜ್ಯಗಳ ಯುದ್ಧಕ್ಕೆ ಆರ್ಥಿಕ ಕಾರಣವೇ ಪ್ರಮುಖ ಅಂಶವಾಗಿತ್ತೆಂಬುದು ನಮಗೆ ಸ್ಪಷ್ಟವಾಗಿ ತಿಳಿಯುತ್ತದೆ. ಈ ರಾಜ್ಯಗಳು ಈ ಪ್ರದೇಶ ತಮ್ಮ ಹತೋಟಿಯಲ್ಲಿ ಹಿಡಿದಿಟ್ಟುಕೊಳ್ಳಲು ಸದಾ ಕಾಳಗಕ್ಕೆ ಇದು ವೇದಿಕೆಯಾಗಿತ್ತು. ಈ ಪ್ರದೇಶದಲ್ಲಿ ಈ ಎರಡು ಸಾಮ್ರಾಜ್ಯದ ಮಧ್ಯ ಇವುಗಳ ಸ್ಥಾಪನೆಯಿಂದ ಅವನತಿಯವರೆಗೆ ನಿರಂತರ ಕದನಗಳು ನಡೆಯುತ್ತಿದ್ದವು.

**೪) ಸಂಪತ್ತಿನ ವ್ಯಾಮೋಹ :**

ದಕ್ಷಿಣ ರಾಜ್ಯಗಳು ಹೊಂದಿದ ಅಪಾರ ಸಂಪತ್ತು ಐಶ್ವರ್ಯ ಬಹಮನಿ ಸುಲ್ತಾನರಗಳಿಗೆ ಮತ್ತಷ್ಟು ಕಿಚ್ಚುನ್ನುಂಟು ಮಾಡಿತ್ತು. ವಿಜಯನಗರ ಮತ್ತು ಇತರ ರಾಜ್ಯಗಳು ಹೊಂದಿದ ವೈಭವವು ತಾವು ಹೊಂದುವ ಆಸೆ ಹೊಂದಿದರು. ಸಂಪತ್ತಿನ ಸಲವಾಗಿ ಅನೇಕ ಆಕ್ರಮಣಗಳನ್ನು ಮಾಡಿದರು. ಇವರು ವಿಜಯನಗರ ಅರಸರನ್ನು ವಾರ್ಷಿಕ ಪೊಗದಿ ಕೊಡುವಂತೆ ಒತ್ತಾಯಿಸುತ್ತಿದ್ದರು. ಸ್ವಾಭಿಮಾನಿ ಅರಸರಾದವರು ಕೂಡದೆಹೋದರಿಂದ ಅವರ ಮೇಲೆ ದಾಳಿಮಾಡಿ ಅಪಾರಹಣವನ್ನು ದೋಚುತ್ತಿದ್ದರು. ಕೊಂಕಣ, ಸಂಗಮೇಶ್ವರ, ವಾಲರಂಗಲ್ ದೊರೆಗಳ ಮೇಲೆ ಉತ್ತರದ ಮಾಳ್ವ, ಖಾಂದೇಶ, ಗುಜುರಾತ ಮಾಂಡಲಿಕರನ್ನು ಸಹ ಅವರು ವಾರ್ಷಿಕ ಹಣ ಕೂಡದೆ ಇದ್ದಾಗ ಅವರ ಮೇಲೆ ಯುದ್ಧವನ್ನು ಕೈಗೊಂಡು ವಾರ್ಷಿಕ ಕಪ್ಪನ್ನು ವಸುಲಿ ಮಾಡುತ್ತಿದ್ದರು. ಬಹಮನಿ ಸುಲ್ತಾನರು ಸಂಗೀತ, ನೃತ್ಯ, ಹಾಗೂ ಕಟ್ಟಡಗಳ ನಿರ್ಮಾಣಕ್ಕಾಗಿ ಅಪಾರ ಸಂಪತ್ತು ಹಾಳುಮಾಡುತ್ತಿದ್ದರು.

ಅದರ ಸಲುವಾಗಿ ಬೇರೆ ರಾಜ್ಯಗಳಿಗೆ ದಾಳಿಮಾಡಿ ಸಂಪತ್ತನು ವಸೂಲಿ ಮಾಡುತ್ತಿದ್ದರು. ಅವರು ಹೊಂದಿದ ಸಂಪತ್ತಿನ ಮೇಲಿನ ವ್ಯಾಮೋಹವು ಅನೇಕ ರೀತಿಯ ಕಾಳಗಗಳಿಗೆ ಅದು ಕಾರಣವಾಯಿತು. ಈ ಎರಡು ರಾಜ್ಯಗಳು ಉದಯಿಸಿದಾಗ ದೋಅಬ್‌ನ ಕೆಲವು ಭಾಗಗಳು ಈ ರಾಜ್ಯಗಳೆರಡಕ್ಕೂ ಸೇರಿತ್ತು. ಆದರೆ ದೋಅಬ್‌ನ ಸಂಪೂರ್ಣ ಪ್ರದೇಶವೆಲ್ಲಾ ತಮ್ಮ ತಮ್ಮ ರಾಜ್ಯಕ್ಕೆ ಸೇರ್ಪಡೆಯಾಗಬೇಕೆಂಬ ಇಚ್ಛೆಯೇ ಈ ಎರಡೂ ರಾಜ್ಯಗಳ ಯುದ್ಧಕ್ಕೆ ಕಾರಣವಾಯಿತು.

ಅದೇ ರೀತಿಯಾಗಿ ಬಹಮನಿ ಹಾಗೂ ವಾರಂಗಲನ ಕಾಕತೀಯ ರಾಜ್ಯಗಳ ಮಧ್ಯ ಕೃಷ್ಣಾ ಮತ್ತು ಗೋದಾವರಿ ನದಿಗಳ ನಡುವಿನ ಭತ್ತದ ಕಣಿವೆ ಪ್ರದೇಶಕ್ಕಾಗಿ ನಿರಂತರ ಕದನಗಳು ಸಂಭವಿಸಿದವು. ಇಲ್ಲಿ ಪ್ರಮುಖವಾಗಿ ಗೋಲ್ಕೊಂಡಾ. ಕೌಲಾಪ್ರದೇಶ, ವಾರಂಗಲನ ತೆಲಂಗಾಣಪ್ರದೇಶ. ಕಂಚಿ, ಮಚಲಿ ಪಟಣಂ ಮುಂತಾದ ಪ್ರದೇಶಗಳಿಗಾಗಿ ಎರಡು ರಾಜ್ಯಗಳ ಮಧ್ಯ ಯುದ್ಧಗಳು ಸಂಭವಿಸಿದವು. ಬಹಮನಿ ಸುಲ್ತಾನ ದೋಅಬ್ ಪ್ರದೇಶ ಫಲವತ್ತಾದ ಪ್ರದೇಶವೆಂದು ತಮ್ಮ ಆಧೀನದಲ್ಲಿಟ್ಟು ಕೊಳ್ಳಲು ಸದಾ ಬೇರೆ ರಾಜ್ಯಗಳೊಂದಿಗೆ ಯುದ್ಧದಲ್ಲಿ ತೊಡಗಿದ್ದರು. ಈ ರೀತಿಯಾಗಿ ದೋಅಬ್ ಪ್ರದೇಶವು ಬಹಮನಿ ಕಾಳಗಗಳಿಗೆ ಒಂದು ಪ್ರಮುಖ ಪ್ರೇರಕವಾದ ಅಂಶವಾಯಿತು.

**೫ ರಾಜ್ಯದಲ್ಲಿಯ ದಂಗೆಗಳು :**

ಬಹಮನಿ ರಾಜ್ಯದಲ್ಲಿ ಸಂಭವಿಸಿದ ಆಂತರಿಕ ದಂಗೆಗಳು ಸಹ ಬಹಮನಿ ಸುಲ್ತಾನರು ಕಾಳಗ ಕೈಗೊಳಲು ಪ್ರಮುಖ ಕಾರಣವಾಗಿದೆ. ಸುಲ್ತಾನರು ಸ್ಥಳಿಯರನ್ನು ಸೋಲಿಸಿ ಅನೇಕ ಸಾಮಂತರನ್ನು ತಮ್ಮ ಅಧಿನದಲ್ಲಿ ಇಟ್ಟಿಕೊಂಡಿದ್ದರು. ಅವರು ಸದಾ ಸ್ವಾತಂತ್ರವಾಗಲು ಹವಣಿಸುತ್ತಿದ್ದರು. ಫೀರೋಜಷಾನ ಆಡಳಿತದ ಅವಧಿಯಲ್ಲಿ ಅನೇಕ ದಂಗೆಗಳು ಸಂಭವಿಸಿದವು. ಉದಾ: ಕ್ರಿ.ಶ ೧೩೯೮ ಸಾಗರದ ಆಧಿಪತಿ ಸಿದ್ದುನ ಬಂಡಾಯ ಉತ್ತರ ಖೇಲರ ಬಂಡಾಯ ಅಹಮ್ಮದಷಾನ ಕಾಲದ ಮಾಹುರ ಗುಜರಾತ ಬಂಡಾಯಗಳು ಕೊಂಕಣದ ಸಂಗಮೇಶ್ವರನ ಬಂಡಾಯಗಳು ಅದಲ್ಲದೆ ದಖ್ಖನ್ನಿ ಮತ್ತು ಆಫಾಕೀಯರ ತಮ್ಮ ಸ್ಥಾನಕ್ಕಾಗಿ ಒಳಸಂಚು ಹಾಗೂ ಬಂಡಾಯಗಳು ನಡೆಸುತಿದ್ದರು. ಇದರಿಂದ ಸುಲ್ತಾನರು ರಾಜ್ಯದಲ್ಲಿ ಶಾಂತಿಯನ್ನು ವ್ಯವಸ್ಥಿತಗೊಳಿಸಲು ದಂಗೆ ಎದ್ದವರ ವಿರುದ್ಧ ಸೈನ್ಯ ಶಕ್ತಿಯ ಮೂಲಕ ಅವರ ದಂಗೆ ಶಮನ ಮಾಡುತಿದ್ದರು. ಆಂತರಿಕ ಭದ್ರತೆಯ ದೃಷ್ಟಿಯಿಂದ ಸಾಮಂತರ ಹಾಗೂ ತಮ್ಮ ಸಂಬಂಧಿಗಳ ದಂಗೆಗಳನೂ ಹತ್ತಿಕ್ಕುತ್ತಿದ್ದರು ಹೀಗೆ ರಾಜ್ಯದಲ್ಲಿ ಉದ್ಭವವಾಗುತ್ತಿದ ಬಂಡಾಯಗಳು ಸಹ ಕಾಳಗಳಿಗೆ ಕಾರಣವಾಗಿದ್ದವು.

**೬) ವೈರಿಗಳ ಆಕ್ರಮಣ :**

ಬಹಮನಿ ರಾಜ್ಯವು ತನ್ನ ವೈರಿಗಳ ಆಕ್ರಮಣದಿಂದ ರಕ್ಷಿಸಿಕೊಳ್ಳಲು ಅನೇಕ ರೀತಿಯ ಹೋರಾಟ ನಡೆದಸಿತ್ತು. ಉದಾ: ವಿಜಯನಗರದ ಅರಸರು ದೋಅಬ್ ಪ್ರದೇಶ ವಶಪಡಿಸಿಕೊಂಡಾಗ ಹಾಗೂ ಓರಿಸ್ಸಾದ ಗಜಪತಿಗಳ ದೊರೆಗಳು ದಾಳಿಗಳಿಂದ ಮತ್ತು ಮಾಳವಾ ಸುಲ್ತಾನರ ದಾಳಿಗಳಿಂದ

ರಕ್ಷಿಸಿಕೊಳ್ಳಲು ದಿಟ್ಟತನವನ್ನು ಅನುಸರಿಸಿ ಅವರೊಂದಿಗೆ ಹೋರಾಟಕ್ಕೆ ಇಳಿದ ಉದಾಹರಣೆಗಳಿವೆ. ಬಹಮನಿಯರ ಮೇಲೆ ಅನೇಕ ವೈರಿ ಅರಸರು ಆಕ್ರಮಣವನ್ನು ಮಾಡಿ ಅನೇಕ ರೀತಿಯ ತೊಂದರೆಗಳನ್ನು ನೀಡುತ್ತಿದ್ದರು. ಇವರ ಆಕ್ರಮಣವನ್ನು ತಡೆಯಲು ಬಹಮನಿಯರು ತನ್ನ ಸೈನ್ಯ ಶಕ್ತಿಯ ಮೂಲಕ ಯುದ್ಧಕ್ಕೆ ಇಳಿಯಬೇಕಾಗುತಿತ್ತು ಪದೆ ಪದೆ ನಡೆಯುತ್ತಿದ್ದ ವೈರಿಗಳ ದಾಳಿಗಳು ಬಹಮನಿಯ ಕಾಳಗಕ್ಕೆ ಪ್ರಮುಖ ಕಾರಣವಾಗಿತ್ತು.

**೭) ಅಭದ್ಯ ಕೋಟೆಗಳು ಮತ್ತು ಫಲವತ್ತಾದ ಪ್ರದೇಶಗಳು :**

ಬಹಮನಿ ಮತ್ತು ಇತರ ರಾಜ್ಯಗಳೊಡನೆ ಪ್ರಮುಖ ಕೋಟೆಗಳು ಮತ್ತು ಫಲವತ್ತಾದ ಪ್ರದೇಶಗಳ ತಮ್ಮ ಆಧಿನಕ್ಕೆ ತೆಗೆದುಕೊಳ್ಳಲು ಅನೇಕ ಕಾಳಗಗಳು ನಡೆದವು. ಪ್ರಮುಖವಾಗಿ ದೋಅಬ್ ಪ್ರದೇಶದ ಮಧ್ಯ ಬರುವ ರಾಯಚೂರ ಮುದಗಲ್ ಕೋಟೆಗಳು ಕಾಳಗಕ್ಕೆ ಪ್ರಮುಖ ಸ್ಥಳಗಳಾಗಿದ್ದವು. ಅವು ಫಲವತ್ತಾದ ಪ್ರದೇಶಗಳಿಂದ ಸಹ ಕೂಡಿದವು. ಅದೇ ರೀತಿ ಅದೋನಿ ಸಹ ಒಂದು ದೊಡ್ಡ ಕೋಟೆಯಾಗಿತ್ತು. ಅದು ಕಡೆದಾದ ಗುಡ್ಡಗಳ ಸಾಲಿನಲ್ಲಿ ನಿಂತಿತ್ತು. ಬಂಕಾಪುರ: ಧಾರವಾಡದ ದಕ್ಷಿಣಕ್ಕಿರುವ ಪ್ರದೇಶ. ಅದು ವಿಜಯನಗರದಿಂದ ಸಮುದ್ರಕ್ಕಿರುವ ನೇರ ಮಾರ್ಗದಲ್ಲಿದ್ದರಿಂದ ಅದು ತನ್ನ ವಶಕ್ಕೆ ಬಂದರೆ ವಿಜಯನಗರದ ವ್ಯಾಪಾರ ಸ್ಥಗೀತವಾಗುವುದು ಎಂದು ದಖನ್ನಿನ ಪ್ರಭುಗಳ ಆಸೆ ಇತ್ತು. ಅದಲ್ಲದೆ ಬೆಳಗಾಂವ ಬಹಳ ಬಲವಾದ ಕೋಟೆಯೊಂದಿತ್ತು. ಅದಲ್ಲದೆ ತೆಲಂಗಾಣ ಪ್ರದೇಶದ ಕೋಟೆಗಳು ಗೋಲ್ಕೊಂಡಾ ಇದು ವಜ್ರದ ನಿಕ್ಷೇಪ ಹೊಂದಿದು. ಜೊತೆಗೆ ಕೌಲಾದುರ್ಗ, ವಾರಂಗಲ್, ರಾಜಮುಂಡ್ರಿ, ಕೊಂಡಪಲ್ಲಿ ಈ ಗಿರಿದುರ್ಗಗಳು ವಶಪಡಿಸಿಕೊಳ್ಳಲು ಸದಾ ಹೋರಾಡಬೇಕಾಗುತ್ತಿತ್ತು. ದಕ್ಷಿಣದ ಕೊಂಕಣ ಪ್ರದೇಶವು ಫಲವತ್ತಾಗಿದ್ದು ಮತ್ತು ವಾಣಿಜ್ಯದ ದೃಷ್ಟಿಯಿಂದಲು ಈ ಪ್ರದೇಶ ಪ್ರಮುಖವಾಗಿತ್ತು. ದಕ್ಷಿಣದ ಕೊಂಕಣ ತೀರದ ಗೋವಾ ಪ್ರದೇಶವು ಪೋರ್ಚುಗೀಸರರೊಂದಿಗೆ ಕುದುರೆ ವ್ಯಾಪಾರಕ್ಕೆ ಇದು ಪ್ರಸಿದ್ಧವಾಗಿತ್ತು. ಇಲ್ಲಿಂದ ಪೋರ್ಚುಗೀಸರು ವಿಜಯನಗರ ಜೊತೆಗೆ ವ್ಯಾಪಾರ ಸಂಬಂಧವನ್ನು ಹೊಂದಿದರು. ಇದನ್ನು ಗೆದ್ದುಕೊಂಡರೆ ವಿಜಯನಗರದ ವ್ಯಾಪಾರ ಸ್ಥಗಿತವಾಗುವುದು ಹಾಗೂ ತಾವು ವ್ಯಾಪಾರ ನಡೆಸಬಹುದು. ಎಂದು ಕೊಂಕಣ ಪ್ರದೇಶವು ಸಹ ಒಂದು ವಾದಗ್ರಸ್ಥ ಸ್ಥಳವಾಗಿತ್ತು. ಹೀಗೆ ಪ್ರಮುಖ ಕೋಟೆಗಳು ಹಾಗೂ ವಾದಗ್ರಸ್ಥ ಫಲವತ್ತಾದ ಪ್ರದೇಶಗಳು ಬಹಮನಿ ಅರಸರ ಕಾಳಗ ಕೈಗೊಳಲಿಕ್ಕೆ ಕಾರಣವಾಗಿದ್ದವು.

**೮) ಸಂಪ್ರದಾಯಿಕ ವೈರತ್ವ :**

ಬಹಮನಿ ಹಾಗೂ ವಿಜಯನಗರ ಎರಡು ಸಾಮ್ರಾಜ್ಯಗಳ ನಡುವಿನ ನಿರಂತರ ಯುದ್ಧವನ್ನು ಹಲವು ಇತಿಹಾಸಜ್ಞರು ಧಾರ್ಮಿಕ ವೈಷಮ್ಯ ಕಾರಣವೆಂದಿದ್ದಾರೆ. ಬಹಮನಿ ಸುಲ್ತಾನರು ಮಹಮ್ಮದಿಯರಾಗಿದ್ದು ಅವರು ವಿದೇಶಿ ದಾಳಿಕೋರರು ಎಂದು ಸ್ಥಳಿಯ ಹಿಂದೂ ಜನರು ನಂಬಿದರು. ಉತ್ತರ ಭಾರತದಲ್ಲಿ ಇಸ್ಲಾಂ ಸಾಮ್ರಾಜ್ಯ ಸ್ಥಾಪನೆಯಾಗಿದ್ದರಿಂದ ದಕ್ಷಿಣದಲ್ಲಿ ಇಸ್ಲಾಂ ಧರ್ಮದ

ಪ್ರಭಾವವನು ತಡೆಗಟ್ಟಿ ಹಿಂದೂ ಧರ್ಮವನ್ನು ರಕ್ಷಿಸಲು ವಿಜಯನಗರ ಸ್ಥಾಪನೆಯಾಯಿತು. ಇವರ ವಿರುದ್ಧ ಬಹಮನಿ ಸುಲ್ತಾನರು ದಕ್ಷಿಣದಲ್ಲಿ ಇಸ್ಲಾಂ ಧರ್ಮ ಸಂಸ್ಕೃತಿಯನ್ನು ಹರಡಿಸಲು ವಿಜಯನಗರ ಹಾಗು ಅನೇಕ ಹಿಂದು ರಾಜಮನೆತನಗಳು ವಿರೋಧಿಗಳಾಗಿದ್ದವು. ಇಂತಹ ರಾಜಮನೆತನಗಳ ಅಸ್ತಿತ್ವವ ಬಹಮನಿ ಸುಲ್ತಾನರ ಅಸಮಾಧನಕ್ಕೆ ಕಾರಣವಾಯಿತು. ಆದರಿಂದಲೆ ಬಹಮನಿ ಸುಲ್ತಾನರು ಅವರನ್ನು ಸಂಪೂರ್ಣವಾಗಿ ಸೋಲಿಸಲು ಪ್ರಯತ್ನಿಸುತ್ತದ್ದರು. ಇದರ ಸಲುವಾಗಿ ಅವರು ಬೇರೆ ಸಂಸ್ಕೃತಿಯೊಂದಿಗೆ ಜಿಹಾದ ಯುದ್ಧವನ್ನು ಕೈಗೊಳ್ಳುತ್ತೀದ್ದರು. ಮಹಮದಿಯರು ಯುದ್ಧದಲ್ಲಿ ವಿಜಯುವಾದ ನಂತರ ಅವರು ಧಾರ್ಮಿಕ ಸ್ಥಳಗಳು, ದೇವಾಲಯುಗಳು ದ್ವಂಸಗೊಳಿಸುತ್ತಿದ್ದರು. ಅಲ್ಲಿಯ ಸಂಪತ್ತನ್ನು ಲೂಟಿ ಮಾಡಿ ಮೂರ್ತಿಗಳನ್ನು ನಾಶಪಡಿಸುತಿದ್ದರು. ಇದರಿಂದ ಸ್ಥಳೀಯ ಜನರು ಇವರ ಬಗ್ಗೆ ಸೇಡಿನ ಭಾವನೆ ಹೊಂದಿದರು. ಅವರ ಸಂಸ್ಕೃತಿಯನ್ನು ಒಪ್ಪಿಕೊಳ್ಳುತಿರಲಿಲ್ಲ ಇದರಿಂದ ಮಹಮದಿಯರು ಒತ್ತಾಯ ಪೂರಕವಾಗಿ ಕಾಳಗಗಳ ಮೂಲಕ ಧರ್ಮಪ್ರಸಾರ ಮಾಡುತ್ತಿದ್ದರು.

**೯) ಸುಲ್ತಾನರ ಮಹತ್ವಾಕಾಂಕ್ಷೆ :**

ಬಹಮನಿ ಸುಲ್ತಾನರು ಮಹತ್ವಾಕಾಂಕ್ಷಿಗಳಾಗಿದ್ದು ಅವರು ಸಾಮ್ರಜ್ಯ ವಿಸ್ತರಿಸುವುದು ಹಾಗೂ ಸಂಪತನ್ನು ಲೂಟಿ ಮಾಡುವುದು ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುವ ಕಾರಣಕ್ಕಾಗಿ ಕಾಳಗಗಳನ್ನು ಕೈಗೊಳ್ಳುತ್ತಿದ್ದರು. ಅಲ್ಲಾವುದ್ದೀನ ಬಹಮನಷಾ, ಒಂದನೆ ಮಹಮದಷಾ, ಫಿರೋಜಷಾ, ಅಹಮ್ಮದಷಾ, ಮಹಮದ ಗವಾನನಂತಹ ಸಮರ್ಥ ಹಾಗೂ ಪ್ರಭಾವಿ ನಾಯಕರಾಗಿದ್ದರು. ಇವರು ಅನೇಕ ಹೋಟ ಮಾಡುವುದರ ಮೂಲಕ ಸಮ್ರಾಜ್ಯವನ್ನು ವಿಸ್ತರಿಸಿದರು. ಅನೇಕ ದೇವಾಲಯುಗಳನ್ನು ದ್ವಂಸಪಡಿಸುತ್ತಿದ್ದರು. ಆದ ಕಾರಣ ಅವರಿಗೆ ಯುದ್ಧಗಳು ಅನಿವಾರ್ಯವಾಗಿತ್ತು.

ಸುಲ್ತಾನರ ತಮ್ಮ ಪ್ರತಿಷ್ಠೆಯ ಸಲುವಾಗಿ ಅನೇಕ ರೀತಿಯ ಯುದ್ಧಗಳನ್ನು ಕೈಗೊಂಡಿದ್ದಾರೆ. ಅಧಿಕಾರಕ್ಕೆ ಬಂದ ಹೊಸ ಸುಲ್ತಾನರು ತಮ್ ಪೂರ್ವಜರು ಅನುಭವಿಸಿದ ಸೋಲಿನ ಸೇಡನ್ನು ತೀರಿಸಿಕೊಳ್ಳಲು ಅವರು ಯುದ್ಧಗಳನ್ನು ಮಾಡುತ್ತಿದ್ದರು. ಈ ರೀತಿಯಾಗಿ ಸುಲ್ತಾನರ ಮಹತ್ವಾಕಾಂಕ್ಷೆಯು ಕಾಳಗಗಳಿಗೆ ಪ್ರಮುಖ ಕಾರಣವಾಗಿತ್ತು.

<>

## ಅಧ್ಯಯ -ಐದು

## ಬಹಮನಿ ಸಾಮ್ರಾಜ್ಯದ ಪ್ರಮುಖ ಕಾಳಗಗಳು

೧) ಮುದೋಳ ಸಂಸ್ಥಾನದ ಮೇಲೆ ದಾಳಿ — ಕ್ರಿ. ಶ ೧೩೪೮

೨) ವಿಜಯನಗರದ ಗಡಿ ಪ್ರದೇಶಗಳ ಮೇಲೆ ದಾಳಿ — ಕ್ರಿ. ಶ ೧೩೫೦

೩) ತೆಲಂಗಾಣ ಪ್ರದೇಶದ ಮೇಲೆ ದಾಳಿ — ಕ್ರಿ. ಶ ೧೩೫೦

೪) ವಾರಂಗಲ್ ಮೇಲೆ ದಾಳಿ — ಕ್ರಿ. ಶ ೧೩೬೨

೫) ಅದೋನಿ ಕಾಳಗ — ಕ್ರಿ. ಶ ೧೩೬೬

೬) ವಿಜಯನಗರ ದೊಂದಿಗೆ ಹೋರಾಟ — ಕ್ರಿ. ಶ ೧೩೭೬

೭) ಮುದೋಳ ಸಂಸ್ಥಾನದ ಮೇಲೆ ದಾಳಿ — ಕ್ರಿ. ಶ ೧೩೯೮

೮) ವಿಜಯನಗರದ ಎರಡನೇ ಹರಿಹರ ನೊಂದಿಗೆ ಕಾಳಗ — ಕ್ರಿ. ಶ ೧೩೯೮

೯) ಉತ್ತರದ ಖೇರಲದ ಮೇಲೆ ದಾಳಿ — ಕ್ರಿ. ಶ ೧೪೦೦

೧೦) ತೈಮೂರನ ಆಸ್ಥಾನಕ್ಕೆ ರಾಯಭಾರ ಸಂಬಂಧ — ಕ್ರಿ. ಶ ೧೪೦೧

೧೧) ಮುದಗಲ್ ಕಾಳಗ — ಕ್ರಿ. ಶ ೧೪೦೬

೧೨) ಗೊಂಡ್ವಾನಾ ಪ್ರದೇಶದ ಮೇಲೆ ದಾಳಿ — ಕ್ರಿ. ಶ ೧೪೧೨

೧೩) ಪೂರ್ವದ ರಾಜ್ಯಗಳ ಮೇಲೆ ದಾಳಿ — ಕ್ರಿ. ಶ ೧೪೧೭

೧೪) ವಿಜಯನಗರದ ಎರಡನೇ ದೇವರಾಯನ ದಾಳಿ — ಕ್ರಿ.ಶ ೧೪೧೯

೧೫) ರಾಜಧಾನಿ ವರ್ಗಾವಣೆ

೧೬) ವಿಜಯನಗರದ ಎರಡನೇ ದೇವರಾಯನೊಡನೆ ಕಾಳಗ ಕ್ರಿ. ಶ ೧೪೨೩

೧೭) ವಾರಂಗಲ್ ಮೇಲೆ ದಾಳಿ ಕ್ರಿ. ಶ ೧೪೨೫

೧೮) ಉತ್ತರದ ಮಾಹೂರನ ಮೇಲೆ ದಾಳಿ ಕ್ರಿ. ಶ ೧೪೨೬

೧೯). ಗೊಂಡ್ವಾನಾ ಪ್ರದೇಶದ ಮೇಲೆ ದಾಳಿ ಕ್ರಿ. ಶ ೧೪೩೦

೨೦) ವಿಜಯನಗರದ ಮೇಲೆ ಆಕ್ರಮಣ ಕ್ರಿ. ಶ ೧೪೩೬

೨೧) ಕೊಂಕಣ ಪ್ರದೇಶದ ಮೇಲೆ ದಾಳಿ ಕ್ರಿ. ಶ ೧೪೩೭

೨೨) ಖಾಂದೇಶ ವಿರುದ್ಧ ಹೋರಾಟ ಕ್ರಿ. ಶ ೧೪೩೮

೨೩) ವಿಜಯನಗರದ ಎರಡನೇ ದೇವರಾಯ ನೊಂದಿಗೆ ಹೋರಾಟ ಕ್ರಿ. ಶ ೧೪೪೩

೨೪) ಕೊಂಕಣದ ಸಂಗಮೇಶ್ವರ ಮೇಲೆ ದಾಳಿ ಕ್ರಿ. ಶ ೧೪೪೬-೪೭

೨೫) ಆಂತರಿಕ ದಂಗೆಗಳು ಕ್ರಿ. ಶ ೧೪೫೫

೨೬) ಪ್ರಜಾಪೀಡಕ (ಜಾಲಿಮ್)ನ ಆಳ್ವಿಕೆ

೨೭) ತೆಲಂಗಾಣ ಮೇಲೆ ದಂಡಯಾತ್ರೆ ಕ್ರಿ.ಶ ೧೪೬೦

೨೮) ದೇವರಕೊಂಡದ ಮೇಲೆ ದಾಳಿ ಕ್ರಿ. ಶ ೧೪೬೦

೨೯) ಒರಿಸ್ಸಾದ ಕಪಿಲೇಂದ್ರನ ದಾಳಿ ಕ್ರಿ.ಶ ೧೪೬೧

೩೦) ಮಾಳವ ಸುಲ್ತಾನನ ದಾಳಿ ಕ್ರಿ.ಶ ೧೪೬೨

೩೧) ಗೋವಾದ ಮೇಲೆ ಆಕ್ರಮಣ ಕ್ರಿ. ಶ ೧೪೬೯

೩೨) ದಕ್ಷಿಣ ಕೊಂಕಣದ ಮೇಲೆ ದಾಳಿ ಕ್ರಿ.ಶ ೧೪೭೦-೭೧

೩೩) ಉತ್ತರ ಕರ್ನಾಟಕ ಪ್ರದೇಶಗಳ ಮೇಲೆ ದಾಳಿ ಕ್ರಿ.ಶ ೧೪೭೨-೭೩

೩೪) ತೆಲಂಗಾಣ ಪ್ರದೇಶ ಮೇಲೆ ದಾಳಿ ಕ್ರಿ.ಶ ೧೪೭೮

೩೫) ಕಂಚಿ ಮೇಲೆ ದಾಳಿ ಕ್ರಿ. ಶ ೧೪೮೧

೩೬) ಮಹಮದ ಗವಾನನ ಮರಣ ಮತ್ತು ಸಾಮ್ರಾಜ್ಯದ ವಿಘಟನೆ

೩೭) ದೋಣಿ ಕಾಳಗ ಕ್ರಿ. ಶ ೧೫೧೦

೩೮) ಗುಲಬರ್ಗಾ ಕದನ ಕ್ರಿ. ಶ ೧೫೧೨

೩೯) ರಾಯಚೂರ ಕಾಳಗ ಕ್ರಿ. ಶ ೧೫೨೦

೪೦) ಗುಲಬರ್ಗಾ ಮೇಲೆ ದಾಳಿ ಕ್ರಿ. ಶ ೧೫೨೩

ಕ್ರಿ. ಶ ೧೩೪೭ ರಲ್ಲಿ ಬಹಮನಿ ರಾಜ್ಯ ಸ್ಥಾಪನೆಯಾದ ನಂತರ ಬಹಮನಿ ಸುಲ್ತಾನರು ಸಮರ್ಥವಾದ ಸೇನಾಬಲ ಹೊಂದಿದ್ದರು. ಇದರ ಮೂಲಕ ಹೈದ್ರಾಬಾದ ಕರ್ನಾಟಕ ಪ್ರದೇಶದಲ್ಲಿ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡರು. ಅವರು ಕಾಳಗ ಕೈಗೊಳ್ಳಲಿಕ್ಕೆ ಪ್ರಮುಖ ಪ್ರೇರಕ ಅಂಶಗಳೆಂದರೆ ಅವರು ಹೊಂದಿದ ಸಾಮ್ರಾಜ್ಯ ವಿಸ್ತರಣಾ ನೀತಿ, ಸಂಪತ್ತಿನ ವ್ಯಾಮೋಹ; ಧಾರ್ಮಿಕ ಕಾರಣಗಳು ಇತ್ಯಾದಿಗಳಿಂದ ಅನೇಕ ರೀತಿಯ ಕಾಳಗಗಳನ್ನು ಕೈಗೊಂಡರು. ಈ ಅಧ್ಯಾಯನದಲ್ಲಿ ಬಹಮನಿ ಸುಲ್ತಾನರು ಕೈಗೊಂಡ ಪ್ರಮುಖ ಕಾಳಗಗಳನ್ನು ಈ ಕೆಳಗಿನಂತೆ ಕ್ರಮಬದ್ಧವಾಗಿ ವಿವರಿಸಲಾಗಿದೆ.

### ೧) ಮುದೋಳ ಸಂಸ್ಥಾನದ ಮೇಲೆ ದಾಳಿ  ಕ್ರಿ. ಶ ೧೩೪೪

ಬಹಮನಿ ಸಾಮ್ರಾಜ್ಯ ಸ್ಥಾಪನೆಯಾದ ನಂತರ ಬಹಮನಿಯ ಸುಲ್ತಾನನಾದ ಅಲ್ಲಾವುದ್ದೀನ್ ಹಸನ ಬಹಮನ್ ಷಾ ತನ್ನ ರಾಜ್ಯವನ್ನು ನಾಲ್ಕು ದಿಕ್ಕಿನಲೂ ವಿಸ್ತರಿಸಲು ಪ್ರಾರಂಭಿಸಿದನು. ಇವನು ಮೊದಲು ದಂಗೆ ಎದ್ದ ಪಾಳೆಗಾರರನು ಹತ್ತಿಕ್ಕಿದನು.

"ಅಲ್ಲಾವುದ್ದೀನನ ವಿರುದ್ದ ದಂಗೆ ಎದ್ದವರಲ್ಲಿ ಮುದೋಳ ಸಂಸ್ಥಾನದ ನಾರಾಯಣ ಘೋರ್ಪಡೆ ಪ್ರಮುಖನಾದವನು"[೧] ಇವನು ಅಲ್ಲಾವುದ್ದೀನ್‌ನ ವಿರುದ್ಧ ಸೋತು ಜಮಖಂಡಿ ಕೋಟೆಯಲ್ಲಿ ಅಡಗಿಕೊಂಡ ನಂತರ ಸುಲ್ತಾನ ಜಮಖಂಡಿಯನ್ನು ವಶಪಡಿಸಿಕೊಂಡನು. ನಾರಾಯಣ ಮತ್ತೆ ಸೋತು ಸುಲ್ತಾನನಿಗೆ ಶರಣಾದ. ಸುಲ್ತಾನ ಇವನನ್ನು ಕ್ಷಮಿಸಿದ ಹಾಗು ಮುದೋಳ ಸಂಸ್ಥಾನವನ್ನು ಜಾಗೀರಾಗಿ ನೀಡಿದನು. ನಂತರ ಬಿಜಾಪುರವನ್ನು ಆಕ್ರಮಿಸಿಕೊಂಡು ಕೊಲ್ಲಾಪೂರ ಮತ್ತು ಕೊಂಕಣ ಬಂದರುಗಳಾದ ದೇಬಾಲ್ ಮತ್ತು ಖಾರ ಪಟ್ಟಣಗಳನ್ನು ಗೆದ್ದು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು.

"ಈ ಹೋರಾಟದಲ್ಲಿ ಅನೇಕ ಹಿಂದು ರಾಜರು ಇವನಗೆ ಬೆಂಬಲ ನೀಡಿದರು. ಈ ಮುತ್ತಿಗೆಯ ನಾಯಕತ್ವವನು ಯಶಸ್ವಿಯಾಗಿ ನಿರ್ವಹಿಸಿದ ಮೇವಾರದ ದೀಪಸಿಂಗ್‌ಗನಿಗೆ ಸುಲ್ತಾನನು ದೌಲತಾಬಾದ್ ಪ್ರಾಂತದಲ್ಲಿ ಹತ್ತು ಹಳ್ಳಿಗಳನ್ನು ಉಂಬಳಿಯಾಗಿ ನೀಡಿದ. ಈ ಅಂಶವನ್ನು ಬಹಮನಿ ಸುಲ್ತಾನರ ೧೩೬೨ ರ ಫರ್ಮಾನದಲ್ಲಿ ದಾಖಲಿಸಿದೆ.[೨]"

### ೨) ವಿಜಯನಗರದ ಗಡಿಗಳ ಮೇಲೆ ದಾಳಿ ಕ್ರಿ. ಶ ೧೩೫೦

ಬಹಮನಿಯ ಸುಲ್ತಾನ ಅಲ್ಲಾವುದ್ದೀನ ಬಹಮನ ಷಾ ವಿಜಯನಗರದ ಗಡಿ ಪ್ರದೇಶ ಮೇಲೆ ದಾಳಿ ಮಾಡಿದ. ಆಗ ವಿಜಯನಗರದಲ್ಲಿ ಒಂದನೆ ಹರಿಹರನು ಆಳ್ವಿಕೆ ಮಾಡುತ್ತಿದ್ದನು.

ವಿಜಯನಗರದ ಗಡಿ ಪ್ರದೇಶಗಳ ಮೇಲೆ ದಾಳಿಮಾಡಿ ರಾಯಚೂರನ್ನು ತನ್ನ ವಶಕ್ಕೆ ತೆಗೆದುಕೊಂಡನು. ಐದು ವರ್ಷಗಳ ನಂತರ ತನ್ನ ಸಂಬಂಧಿಯಾಗಿದ್ದ ಮಧುರೈ ಸುಲ್ತಾನನ ಸಹಾಯ ಪಡೆದು ವಿಜಯನಗರದ ಮೇಲೆ ಎರಡನೆ ಬಾರಿಗೆ ದಾಳಿಮಾಡಿದನು. ಹಾಗು ಅನೇಕ ಪ್ರದೇಶಗಳು

ವಶಪಡಿಸಿಕೊಂಡನು. "ಮುಸ್ಲಿಂ ಆಧಾರಗಳ ಪ್ರಕಾರ ಬಹಮನ್ ಷಾ ತುಂಗಾಭದ್ರ ನದಿವರೆಗೂ ತನ್ನ ದಾಳಿಯನ್ನು ಮುಂದುವರೆಸಿದನೆಂದು ತಿಳಿದಿರುತ್ತದೆ"[೩]

**೩) ತೆಲಂಗಾಣ ಪ್ರದೇಶದ ಮೇಲೆ ದಾಳಿ ಕ್ರಿಶ ೧೩೫೦**

ಬಹಮನಿಯ ಸುಲ್ತಾನ ಅಲ್ಲಾವುದ್ದೀನ ಬಹಮನ ಷಾ ತೆಲಂಗಾಣ ಪ್ರದೇಶ ಮೇಲೆ ದಾಳಿ ನಡಸಿದನು. ತೆಲಂಗಾಣ ಪ್ರದೇಶದ ವಾರಂಗಲ್‌ನಲ್ಲಿ ಕಾಪಯ ನಾಯಕನು ಆಳ್ವಿಕೆ ಮಾಡುತಿದ್ದನು.

ವಾರ್ಷಿಕ ಪೊಗದಿ ಕೊಡದೆ ಇರುವುದು ಈ ದಾಳಿಗೆ ಕಾರಣವಾಯಿತು. ಅಲ್ಲಾವುದ್ದೀನನ ಸೇನಾನಾಯಕನಾದ ಸಿಕಂದರ್‌ಖಾನನು ತೆಲಂಗಾಣ ಪ್ರಾಂತ ಮೇಲೆ ದಾಳಿ ಮಾಡಿ ಅನೇಕ ಪ್ರದೇಶಗಳನ್ನು ಗೆದ್ದುಕೊಂಡನು.

"ಯುದ್ಧದಲ್ಲಿ ಪರಾಭವಗೊಂಡ ವಾರಂಗಲ್‌ನ ಕಪಯನಾಯಕನು ಸುಲ್ತಾನನಿಗೆ ಕೌಲೆ ದುರ್ಗವನ್ನು ಒಪ್ಪಿಸಿಕೊಟ್ಟು ಪ್ರತಿ ವರ್ಷವು ವಾರ್ಷಿಕ ಪೊಗದಿಯನ್ನು ಕೊಡುವುದಾಗಿ ಒಪ್ಪಿಕೊಂಡನು"[೪]

**೪) ವಾರಂಗಲ್ ಮೇಲೆ ದಾಳಿ ಕ್ರಿ ಶ ೧೩೬೨ :**

ಅಲ್ಲಾವುದ್ದೀನ್ ಬಹಮನ್‌ಷಾ ಮರಣದ ನಂತರ ಅವನ ಮಗ ಒಂದನೇ ಮಹಮದ್ ಬಹಮನಿಯ ಸುಲ್ತಾನನಾದ. ಇವನ ಕಾಲದಲ್ಲಿ ವಿಜಯನಗರ ಹಾಗೂ ಅದರ ಮೈತ್ರಿಯುತ ವಾರಂಗಲ ದೊರೆಗಳು ದೋಅಬ್‌ನ ಪ್ರದೇಶವನ್ನು ಬಿಟ್ಟು ಕೊಡುವಂತೆ ಮಹಮದನಿಗೆ ತಿಳಿಸಿದರು.

ಆದರೆ ಸುಲ್ತಾನ ಅವರುಗಳ ಕೋರಿಕೆಗೆ ಮಣಿಯದೆ ಆ ಪ್ರದೇಶದಲ್ಲಿ ಬಹಮನಿ ಸಾಮ್ರಾಜ್ಯದ ಸಾರ್ವಭೌಮತ್ವ ಸ್ಥಾಪಿಸಬೇಕೆಂದ. ಇದರಿಂದ ಯುದ್ಧವೊಂದೇ ಅನಿವಾರ್ಯವಾದಂತಾಯಿತು.

ಕ್ರಿ.ಶ ೧೩೬೨ ರಲ್ಲಿ ವಿಜಯನಗರ ಮತ್ತು ವಾರಂಗಲ್‌ನ ಸೈನ್ಯಗಳೆರಡು ಕಾಪಯನಾಯಕನ ಮಗ ವಿನಾಯಕದೇವನ ನೇತೃತ್ವದಲ್ಲಿ ಕೌಲಾಪ್ರದೇಶದತ್ತ ಹೋರಟವು. "ಕೋಪಗೊಂಡ ಮಹಮದ್‌ನು 'ವೆಲ್ಲನ್‌ಪಟ್ಟನ್' ನಗರದತ್ತ ಸೈನ್ಯವನು ಭರದಿಂದ ಸಾಗಿಸಿದ. ಸುಲ್ತಾನನ ಸೈನ್ಯ ಅಮೀರ್ ಉಲ್ ಉಮಾರಾ ಬಹದ್ದೂರ್ ಖಾನ್ ನೇತೃತ್ವದಲಿತ್ತು, ಮೈತ್ರಿ ಸೈನ್ಯದ ವಿರುದ್ದ ಹೋರಾಟ ನಡೆಸಿತು ಅವರು ಅದನ್ನು ವಶಪಡಿಸಿಕೊಂಡು ಅಲ್ಲಿಯ ನಿವಾಸಿಗಳನ್ನು ದಯೆಯಿಲ್ಲದೆ ಕೊಂದುಹಾಕಿದ, "ನತದೃಷ್ಟ ವಿನಾಯಕ ದೇವನನ್ನು ಸೆರೆಹಿಡಿದರು ಸುಲ್ತಾನ್ನು ದುರ್ಗದ ಮುಂದೆ ಕಟ್ಟಿಗೆಯ ರಾಶಿಗೆ ಉರಿ ಹಚ್ಚಿ ಗೋಡೆಗಳಿಂದ ಜ್ವಾಲೆಗಳಲಲ್ಲಿ ಅವನನ್ನು ಎಸೆಯಲಾಯಿತ್ತು"[೫]

ಚರಿತ್ರೆಕಾರ ಈಶ್ವರಿ ಪ್ರಸಾದರು ಹೇಳುವಂತೆ "ತೆಲಂಗಾಣದ ಮೇಲಿನ ಯುದ್ಧ ಮಧ್ಯದಲ್ಲಿ ತೆಲಂಗಾಣ ರಾಜಕುಮಾರನನ್ನು ಕ್ರೌರ್ಯದಿಂದ ಕೊಲ್ಲಲಾಯಿತು ಎಂದು ಹೇಳುತ್ತಾರೆ"[೬]

"ಕೆಲವು ದಿನಗಳ ವಿಶ್ರಾಂತಿಯ ನಂತರ ಸುಲ್ತಾನ ರಾಜಧಾನಿಗೆ ಮರಳಿದ. ಸ್ಥಳಿಯ ಅನೇಕ ದೊಡ್ಡ ದೊಡ್ಡ ಪಡೆಗಳು ಅವನನ್ನು ಬೆನ್ನಟ್ಟಿ ಪಿಡಿಸಿದವು. ೧೫೦೦ ಸೈನಿಕರೊಂದಿಗೆ ಗುಲಬರ್ಗಾಕ್ಕೆ ಮರಳಿದನು"[೭]

ಇದಾದ ನಂತರ "ವಿಜಯನಗರದ ಬುಕ್ಕ ಮತ್ತು ವಾರಂಗಲ್‌ನ ಕಪಾಯ ನಾಯಕನು ದೆಹಲಿಯ ಸುಲ್ತಾನ ಫಿರೋಜ್‌ಷಾ ತುಗಲಕನಿಗೆ ತಮ್ಮ ನೆರವಿಗೆ ಬರಲು ಸಂಯುಕ್ತ ರಾಯಭಾರ ಕಳಿಸಿದರು. ತುಘಲಕನು ತನ್ನ ಸುಧಾರಣಾ ಕಾರ್ಯಗಳಲ್ಲಿ ನಿರತನಾಗಿದ್ದುದರಿಂದ ಈ ನಿವೇದನೆಯ ಕಡೆಗೆ ಲಕ್ಷ ಕೊಡಲಿಲ್ಲ."[೮]

ಇದರಿಂದ ಉತ್ತೇಜೀತನಾದ ಸುಲ್ತಾನ ಮಹಮ್ಮದ ತನ್ನ ರಾಜಧಾನಿಯ ರಕ್ಷಣೆಗೆ ಮಂತ್ರಿಯಾದ ಸಯಫ್‌ಉದ್ದೀನ್ ಘೋರಿಯನ್ನು ನಿಯಮಿಸಿ ತೆಲಂಗಾಣದ ಕಡೆಗೆ ಹೊರಟ. ಮಹಮ್ಮದ ಹೊಸ ಸೈನ್ಯಗಳನ್ನು ಕೂಡಿಸಿದ ಮತ್ತು ಅವುಗಳನ್ನು ವಾರಂಗಲ್ ಮತ್ತು ಗೋಲ್ಕೊಂಡಗಳ ವಿರುದ್ಧ ಎರಡು ತುಕಡಿಗಳಲ್ಲಿ ಕಳಿಸಿದ. ವಾರಂಗಲ್ ಸೈನ್ಯ ಸುಮ್ಮನೆ ಶರಣಾಗಲಿಲ್ಲ. ಎರಡು ವರ್ಷಗಳ ಕಾಲ ವಿರೋಧಿಸಿದ ನಂತರ ರಾಜ ಶರಣಾಗತನಾದ. ಫಿರೋಜಷಾಹ ನೊಂದಿಗೆ ಒಪ್ಪಂದ ಮಾಡಿಕೊಂಡ.

"ಸುಲ್ತಾನ ಶಾಂತಿಯ ಬೆಲೆಯಾಗಿ ಗೋಲ್ಕೊಂಡವನ್ನು ಮತ್ತು ಯುದ್ಧದ ಖರ್ಚಿಗಾಗಿ ವಿಶೇಷ ಹಣವನ್ನು ಪಡೆದುಕೊಂಡ, ಅಷ್ಟೆ ಅಲ್ಲದೆ ಚಿನ್ನದ ಭವ್ಯ ಸಿಂಹಾಸನವೊಂದನ್ನು ಪಡೆದ. ಬಹು ಬೆಲೆಯ ಅಮೂಲ್ಯ ಹರಳುಗಳಿಂದ ಜೋಡಿಸಲಾದ ಸಿಂಹಾಸನದ ಬೆಲೆ ನಾಲ್ಕು ದಶಲಕ್ಷ ಪೌಂಡುಗಳೆಂದು ಅಂದಾಜು ಮಾಡಲಾಯಿತು. ಈ ಸಿಂಹಾಸನವು ವೈಭವಯುತಬಾಗಿ ಗುಲಬರ್ಗಾದ ಅರಮನೆಯ ಸಭಾಂಗಣದಲ್ಲಿ ಸ್ಥಾಪಿತವಾಯಿತು."[೯]



೫) ಅದೋನಿ ಕಾಳಗ ಕ್ರಿ. ಶ ೧೩೬೬ :

ಕ್ರಿ.ಶ. ೧೩೬೬ ರ ಅವಧಿಯಲ್ಲಿ ಸುಲ್ತಾನ ಮಹಮದಷಾ ವಿಜಯನಗರದ ವಿರುದ್ಧ ತನ್ನ ಪ್ರಥಮ ಕ್ರಮಬದ್ಧ ದಂಡಯಾತ್ರೆ ಆರಂಭಿಸಿದನು. ವಿಜಯನಗರದಲ್ಲಿ ಒಂದನೆ ಬುಕ್ಕರಾಯ ಆಳ್ವಿಕೆಮಾಡುತ್ತಿದ್ದ.

ಮಹಮ್ಮದನು ತಾನು ಭವ್ಯ ಸಿಂಹಾಸನದಲ್ಲಿ ಅಲಂಕರಿಸಿದ ನೆನಪಿಗಾಗಿ ನೃತ್ಯ ಮತ್ತು ಸಂಗೀತಗಾರ್ತಿಯನ್ನು ನೇಮಿಸಿದ. ಗುಲಬರ್ಗಾದಲ್ಲಿ ನಡೆದ ಸಮಾರಂಭದಲ್ಲಿ ರಂಜಿಸಿದ ದೆಹಲಿಯ ಸಂಗೀತಗಾರರಿಗೆ ಕೊಡಬೇಕಾದ ಸಂಭಾವನೆ ಹಣವನ್ನು ವಿಜಯನಗರದ ಅರಸ ಕೊಡುವಂತೆ ಮಹಮದ್‌ನು ಆದೇಶಿಸಿದ.

ಹುಂಡಿಗೆ ರಾಜಮುದೆ ಒತ್ತಿ ವಿಶೇಷ ದೂತನ ಮೂಲಕ ವಿಜಯನಗರದ ರಾಯನಡೆಗೆ ಕಳಿಸಿದನು. ತನ್ನ ಸ್ವಾತಂತ್ರ್ಯದ ಬಗೆ ಅಭಿಮಾನವುಳ್ಳ ಒಂದನೇ ಬುಕ್ಕರಾಯನು ಆ ಹುಂಡಿ ತಂದವನನ್ನು ಕತ್ತೆಯ ಮೇಲೆ ಕುಳ್ಳಿರಿಸಿ ವಿಜಯನಗರದ ಎಲ್ಲಾ ಭಾಗಗಳಲ್ಲಿಯೂ ಮೆರೆಸಿ ತಿರಸ್ಕಾರ ಮಾಡಿ ವಾಪಸು ಕಳುಹಿಸಿದ. ಹಾಗೂ ತನ್ನ ಸೈನ್ಯವನ್ನು ಕೊಡಿಸಿ ಬುಕ್ಕರಾಯ ಬಹಮನಿ ರಾಜ್ಯದ ಮೇಲೆ ಯುದ್ಧ ಸಾರಿದ.

"ಇವರ ಸೈನ್ಯ ಒಟ್ಟು ಮೂವತ್ತು ಸಾವಿರ ಕುದುರೆ ಮೂರು ಸಾವಿರ ಆನೆ ಮತ್ತು ಒಂದು ನೂರು ಸಾವಿರ ಕಾಲದಳದೊಂದಿಗೆ ಆದೋನಿ ಕೋಟೆಯನ್ನು ಆಕ್ರಮಿಸಿದ"[೧೦]

ಮಳೆಗಾಲವಾಗಿದ್ದರೂ ಸಹ ರಾಯನು ಕೃಷ್ಣಾ ಮತ್ತು ತುಂಗಾಭದ್ರಾ ನದಿಗಳ ನಡುವಣ ರಾಯಚೂರ ದೋಅಬ್ ಪ್ರದೇಶ ಹಾಗೂ ತ್ರಿಕೋಣಾಕೃತಿಯ ವಿಶಾಲ ಪ್ರದೇಶದಲ್ಲಿನ ಮುದಕಲ್‌ಗೆ ಮುನ್ನುಗ್ಗಿ ಮುದಗಲ್ ಕೋಟೆ ವಶಪಡಿಸಿಕೊಳ್ಳಲಾಯಿತು. ಹಾಗೂ ಅಲ್ಲಿಯ ನಿವಾಸಿಗಳನ್ನು ಕೊಲೆಡಮಾಡಲಾಯಿತ್ತು. ಅದನ್ನು ಕೇಳಿ ಮಹಮ್ಮದಶಾಹ ದುಃಖ ಹಾಗೂ ಕೋಪಪರವಶನಾಗಿ ನತದೃಷ್ಟ ಓಲೆಕಾರನನು ತಕ್ಷಣ ಕೊಲ್ಲವಂತೆ ಆಜ್ಞಾಪಿಸಿದ.

"ಅದೇ ದಿನ ಅಂದರೆ ಜನವರಿ ೧೪ ರಿಂದ ಫೆಬ್ರವರಿ ೧೩ ಕ್ರಿ.ಶ ೧೩೬೬ ರವರೆಗೆ ಇದ್ದ ಜಮಾದ್-ಉಲ್-ಅವ್ವರ ತಿಂಗಳಲ್ಲಿ ಒಂದು ದಿನ ಸುಲ್ತಾನ ಗಂಭೀರ ಪ್ರಮಾಣ ಮಾಡಿದ. ನಿಜ ಭಕ್ತರ ಕೊಲೆಯ ಪರಿಹಾರವಾಗಿ ಒಂದು ನೂರು ಸಾವಿರ ಕಾಫಿರರನ್ನು ಕೊಲ್ಲುವವರೆಗೆ ಯುದ್ಧದ ಖಡ್ಗವನ್ನು ಒರೆಯಲ್ಲಿ ಸೇರಿಸಲಾರೆ. ಹತ್ಯೆಯನ್ನು ನಿಲ್ಲಿಸಲಾರೆ ಮುದಕಲ್ ಹುತಾತ್ಮರ ಆತ್ಮಗಳನ್ನು ತಣಿಸುವ ತನಕ ತಾನು ಊಟ ನಿದ್ದೆ ಮಾಡುವು ನ್ಯಾಯ ಸಮ್ಮತವಲ್ಲ.
ಎಂದು ದೈವಧಾಣೆಯಾಗಿ ಪ್ರತಿಜ್ಞೆಗೈದ."[೧೧]

ತನ್ನ ಮಗ ಮುಜಾಹಿದ ಶಾಹನನು ತನ್ನ ಉತ್ತರಾಧಿಕಾರಿಯೆಂದು ಹಾಗು ಮಲ್ಲಿಕ್ ಸೈಪೊದ್ದೀನ್ ನನ್ನು ರಾಜ ಪ್ರತಿನಿಧಿಯೆಂದು ನೇಮಿಸಿದ. ನಂತರ ತಡಮಾಡದೆ ಆಯ್ದು ಒಂಬತ್ತು ಸಾವಿರ ಆಶ್ವದಳದೊಂದಿಗೆ ನದಿ ದಾಟಿದ. ವಿಜಯನಗರದ ರಾಯನಲ್ಲಿ ಬೃಹತ ಸೈನ್ಯವಿದ್ದರು ಎಷ್ಟು ಗಾಬರಿಯಾದನೆಂದರೆ ಮರುದಿನ ಬೆಳಿಗ್ಗೆ ಎಲ್ಲಾ ಸಂಪತ್ತು, ಬೆಲೆಬಾಳುವ ಸಾಮಾನು ಮತ್ತು ಆನೆಗಳನ್ನು ರಾಜಧಾನಿಯ ಕಡೆಗೆ ಕಳಿಸಿಕೊಟ್ಟ. ರಾತ್ರಿ ಹೊತ್ತಿನಲ್ಲಿ ಮಹಮ್ಮದಶಾಹ ಶತ್ರುಗಳ ಚಲನೆ ಬಗೆಗೆ ತಿಳಿದುಕೊಂಡು ತಕ್ಷಣ ತನ್ನ ಶಿಬಿರವನ್ನು ಇದ್ದಂತೆಯೆ ಬಿಟ್ಟು ಅವರತ್ತ ನಡೆದ. ನಸುಕಿನಲ್ಲಿ ಅವನು ರಾಯನ ಶಿಬಿರ ತಲುಪಿದ. ರಾಯನ ಶಿಬಿರದಲ್ಲಿ ಗೊಂದಲ ಉಂಟಾಗಿ ಸೈನಿಕರು ಎಲ್ಲವನ್ನು ಬಿಟ್ಟು ಅತ್ಯಂತ ಅವಸರದಿಂದ ಅದೋನಿ ಕೋಟೆಯತ್ತ ಓಡಿದರು. ಮಹಮ್ಮದ ಶಾಹ ಅವರ ವ್ಯಾಪಾರ ಸ್ಥಳ ಹಾಗೂ ಸಾಮಾನು ಸರಂಜಾಮಿನ ಶಿಬಿರವನ್ನು ಪ್ರವೇಶಿಸಿದ ಮತ್ತು ಯಾವ ಭೇದ ಭಾವ ತೋರದೆ ಎಲ್ಲರನ್ನೂ ಕೊಂದ. ಎಪ್ಪತ್ತು ಸಾವಿರ ಪುರುಷರು ಸ್ತ್ರೀಯರು ಮತ್ತು ಮಕ್ಕಳು ಕೊಲೆಯಾದನೆಂದು ಹೇಳಲಾಗುತ್ತದೆ. ಮಹಮ್ಮದಷಾ ಆ ವರ್ಷ ಬೇಸಿಗೆ ಹಾಗೂ ಮಳೆಗಾಲದ ಆದಿ ಭಾಗವನ್ನು ಮುದಗಲ್ ಹತ್ತಿರ ಕಳೆದ. ಹೆಚ್ಚುವರಿ ಸೈನ್ಯವನ್ನು ತೆಗೆದುಕೊಂಡು ಆದೋನಿ ವಿರುದ್ಧ ನಡೆದ. ಈ ಕಡೆ ಬುಕ್ಕರಾಯನು ಆದೋನಿ ಬಯಲಿನ ತುಂಗಭದ್ರ ನದಿ ದಡಗಳ ಮೇಲೆ ಸೈನಿಕ ಠಾಣೆ ಹೊಂದಿದ ಅಲ್ಲಿ ಅವನು ದೊಡ್ಡ ಸೈನ್ಯವನ್ನು ಜಮಾಯಿಸಿದ್ದ.

"ಸುಲ್ತಾನನಲ್ಲಿ ಫರಂಗಿ ಪಡೆ ಇತ್ತು. ಸುಲ್ತಾನನು ಅದೋನಿ ಕೋಟೆ ಆಕ್ರಮಿಸುವಾಗ ಸಿಡಿ ಮದ್ದನ್ನು ಬಳಕೆಗೆ ತಂದನು"[೧೨] ಅವನು ತುಂಗಭದ್ರ ನದಿ ದಾಟಿದ ಮತ್ತು ವಿಜಯನಗರದ ಪ್ರಾಂತಗಳನ್ನು ಪ್ರವೇಶಿಸಿದ. ಅವುಗಳ ಮೇಲೆ ಮಹಮ್ಮದಿಯ ಸಾರ್ವಭೌಮವನ್ನು ಖುದ್ದಾಗಿ ದಾಳಿ ಇಟ್ಟುದು ಇದೇ ಮೊದಲು. ಮಹಮ್ಮದ ತುಂಗಭದ್ರ ದಾಟಿದ ಅವನ ಮತ್ತು ಆದೋನಿಯ ದೊಡ್ಡ ಕೋಟೆಯ

ಮಧ್ಯೆ ಕೇವಲ ೨೫ ಮೈಲು ಅಂತರವಿತ್ತು. ಅದು ನದಿಯಿಂದ ಸುಮಾರು ಅಷ್ಟೇ ದೂರದಲ್ಲಿ ಕಡಿದಾದ ಗುಡ್ಡಗಳ ಸಾಲಿನಲ್ಲಿತ್ತು. ಈ ದಂಡಯಾತ್ರೆಯ ಸ್ಥಳಗಳನ್ನು ಖಚಿತವಾಗಿ ಗುರುತಿಸುವುದು ಕಷ್ಟಕರ. "ಈಗಿನ ಸಿರಗುಪ್ಪಾ ಪಟ್ಟಣದ ಹತ್ತಿರ ನದಿ ದಾಟಿ ಯುದ್ಧ ಸಂಭವಿಸಿತ್ತು ಎನ್ನಲಾಗಿದೆ."[೧೩] ಮಹಮ್ಮದ ದಾಟಿದ ಸುದ್ದಿ ತಿಳಿದು ರಾಯ ದರಬಾರದ ಪ್ರಥಮ ಮನ್ನಯರ ಸಭೆ ಕರೆದು ಹೋಜೆಮಲ್‌ನನ್ನು ದಂಡನಾಯಕ ನಾಗಿ ನೇಮಿಸಿದ. ಮಹಮ್ಮದ ಶಾಹನನ್ನು ಎದುರಿಸಲು ನಲವತ್ತು ಸಾವಿರ ಕುದುರೆ ಐವತ್ತು ಸಾವಿರ ಕಾಲಾಳುಗಳೊಂದಿಗೆ ನಡೆದು ತನ್ನ ಶಿಬಿರದಿಂದ ಹದಿನ್ನೆಂದು ತಾಸ್‌ಗಳಲೆ ಬಂದ.

"ಸುಲ್ತಾನನು ತನ್ನ ದಂಡನಾಯಕ ಖಾನ ಮಹಮ್ಮದನ ನೇತೃತ್ವದಲ್ಲಿ ಹದಿನೈದು ಸಾವಿರ ಕುದುರೆ ಹಾಗೂ ಐವತ್ತು ಸಾವಿರ ಕಾಲಾಳುಗಳೊಂದಿಗೆ ಮುಂದೆ ಕಳುಹಿಸಿಕೊಟ್ಟ. ಜುಲೈ ೨೩ ೧೩೬೬ ರಂದು ವಿಜಯನಗರ ಮತ್ತು ಬಹಮನಿ ಸೈನ್ಯಗಳು ಒಂದನ್ನೊಂದು ಎದುರಿಸಿದವು. ನಸುಕಿನಿಂದ ಮಧ್ಯಾಹ್ನ ನಾಲ್ಕುರವರೆಗೆ ಸಮುದ್ರದ ತೆರೆಗಳಂತೆ ಅವು ಘೋರ ಕದನ ಮುಂದುವರಿಸಿದವು. ಎರಡು ಬದಿಗಳಲ್ಲಿ ಬಹುಸಂಖ್ಯೆಯಲ್ಲಿ ಸಾವುಗಳಾದವು. ಸುಲ್ತಾನ ಸೈನ್ಯದಲ್ಲಿ ಖಾನಮಹಮ್ಮದ ಮೂಸೆಖಾನ ಹಾಗೂ ಈಸೆಖಾನ ದಂಡನಾಯಕರು ಯುದ್ಧ ಮುಂದುವರೆಸಿದರು"[೧೪] ಈ ಹೊತ್ತಿಗೆ ಮಹಮ್ಮದಷಾಹ ಮೂರು ಸಾವಿರ ಹೊಸ ಕುದುರೆಗಳೊಂದಿಗೆ ಬಂದ. ಇದು ಖಾನ ಮಹಮ್ಮದನ ಮತ್ತು ಅವರ ಸೈನ್ಯದಲ್ಲಿ ಉತ್ಸಾಹ ಪುನಚ್ಚೇತನಗೊಳಿಸಿತು ಫಿರಂಗಿದಳದ ನೇತೃತ್ವ ವಹಿಸಿದ ಮುಕ್ರಿಬ್‌ಖಾನ ಹಿಂದೆ ಬಿಳದೆ ವಿಜಯನಗರದ ಅಶ್ವದಳ ಮತ್ತು ಕಾಲದಳಗಳನ್ನು ಚಲ್ಲಾಪಿಲಿಗೊಳಿಸಿದ. ಮಹಮ್ಮದಿಯರ ಸೈನ್ಯ ಎಷ್ಟು ಶೀಘ್ರವಾಗಿ ಮನ್ನಡೆಯತೆಂದರೆ ಹಿಂದುಗಳಿಗೆ ಸಿಡಿಮದ್ದ (ಅಂದರೆ ಫಿರಂಗಿ) ನ್ನು ಬಳಸಲು ಸಮಯವೆ ಸಿಗದಂತಾಯಿತು. ಕತ್ತಿ ಕಠಾರಿಗಳಂತಹ ಗಿಡ್ಡ ಆಯುಧ ಬಳಸಬೇಕಾಯಿತು. "ಖಾನ ಮಹಮ್ಮದನಿಗೆ ಸೇರಿದ ಶೇರಸಿಕಾರ ಎಂಬ ಆನೆ ವಿಜಯನಗರದ ಪಂಕ್ತಿಯ ಮಧ್ಯದಲ್ಲಿ ನುಗ್ಗಿತ್ತು. ಖಾನ ಮಹಮ್ಮದ ಐದುನೂರು ಕುದುರೆಗಳೊಂದಿಗೆ ಹಿಂಬಾಲಿಸಿದ. ಆಗ ಆನೆ ಮದವೇರಿ ಶತ್ರುಗಳ ಮೇಲೆ ಏರಿಹೋಗಿ ಅವರ ಪಂಕ್ತಿಗಳಲ್ಲಿ ಗೊಂದಲ ಉಂಟು ಮಾಡಿತು"[೧೫]. ವಿಜಯನಗರದ ದಂಡನಾಯಕ ಹೋಜೆಮಲ್ ಪ್ರಾಣಾಂತಿಕ ಗಾಯದಿಂದ ಓಡಿದನು. ಅವನ ಅನುಯಾಯಿಗಳು ಪ್ರತಿರೋಧ ವಡ್ಡಲಿಲ್ಲಿ. ಮಧ್ಯ ಭಾಗ ಚದುರಿಹೋಯಿತು. ವಿಜಯನಗರ ಸೈನಿಕರು ಎಲ್ಲ ದಿಕ್ಕುಗಳಿಗೆ ಓಡತೊಡಗಿದರು.

ಸುಲ್ತಾನನು ಕಾಫಿರರ ಹತ್ಯೆಯನ್ನು ಪುನರಾರಂಭಿಸಲು ಆಜ್ಞೆಯಿತ್ತ. ಅದನ್ನು ಎಷ್ಟೊಂದು ಕಟ್ಟುನಿಟ್ಟಿನಿಂದ ಪಾಲಿಸಲಾಯಿತೆಂದರೆ ಬಸರಿ ಹೆಂಗಸರು ಮತ್ತು ಮೊಲೆ ಕುಡಿಯುವ ಕೂಸುಗಳು ಸಹ ಖಡ್ಗದಿಂದ ಪಾರಾಗಲಿಲ್ಲ. ಮಹಮ್ಮದಶಾ ರಣರಂಗದಲ್ಲಿ ಒಂದುವಾರ ನಿಂತ ಮತ್ತು ತನ್ನ ವಿಜಯದ ವೃತ್ತಾಂತವನ್ನು ತನ್ನ ಪ್ರಾಂತಗಳಿಗೆ ರವಾನಿಸಿದ. ಅವನು ಬುಕ್ಕರಾಯನ ಶಿಬಿರದತ್ತ ನಡೆದ. ಬುಕ್ಕರಾಯನಲ್ಲಿ ಸೈನ್ಯವಿದ್ದರೂ ಸಹ ಎದುರಿಸಲು ಶಕ್ತನಾಗದೆ ಆಶ್ರಯಕ್ಕಾಗಿ ಕಾಡು ಬೆಟ್ಟಗಳಿಗೆ ಓಡಿದ. ತನ್ನ ಮಾರ್ಗದಲ್ಲಿ ಬಂದ ಎಲ್ಲರನ್ನು ತಾರತಮ್ಯವಿಲ್ಲದೆ ಕೊಂದು ಹಾಕುತ್ತ

ಸುಲ್ತಾನನು ಬುಕ್ಕರಾಯನನ್ನು ಸ್ಥಳದಿಂದ ಸ್ಥಳಕ್ಕೆ ಬೆನ್ನಟ್ಟಿದ. ನಂತರ ಬುಕ್ಕರಾಯ ರಾಜಧಾನಿ ವಿಜಯನಗರಕ್ಕೆ ಮರಳಿದ. "ಸುಲ್ತಾನ ವಿಜಯನಗರ ಮುತ್ತಿಗೆ ಹಾಕಿದ ಅದು ಯಶಸ್ವಿಯಾಗಲಿಲ್ಲ. ಮಹಮ್ಮದ್‌ನು ಹಿನ್ನೆಡೆದಂತೆ ಮಾಡಿ ಏಕಾಏಕಿಯ ಅನಿರೀಕ್ಷಿತವಾದ ರಾತ್ರಿ ಆಕ್ರಮಣ ಮಾಡಿದರು. ಬುಕ್ಕರಾಯ ಜಾಗೃತನಾಗಿರಲಿಲ್ಲ. ಮಹಮ್ಮದನ ಆಕ್ರಮಣದಿಂದ ರಾಯ ವಿಜಯನಗರಕ್ಕೆ ಓಡಿದ ಹತ್ಯ ಭಯಾನಕರವಾಗಿತ್ತು ರಾಯನ ಹತ್ತು ಸಾವಿರ ಯೋಧರು ಕೊಲೆಯಾದರು. ಆದರೆ ಇದರಿಂದ ಸುಲ್ತಾನ ಕೋಪಾಗ್ನಿ ಶಮನಗೊಳ್ಳಲಿಲ್ಲ ವಿಜಯನಗರದ ಸುತ್ತಲಿನ ಪ್ರತಿ ಊರಿನ ನಿವಾಸಿಗಳನ್ನು ಕರುಣೆ ಇಲ್ಲದೆ ಕೊಲ್ಲಲಾಯಿತು"[೧೬]

ಆಗ ಬುಕ್ಕ ಶಾಂತಿಗಾಗಿ ಪ್ರಯತ್ನಿಸಿದ ಆದರೆ ಸುಲ್ತಾನ ನಿರಕರಿಸಿದ.

"ಅಮಾಯಕರು ಅದಕಲ್ಲೂ ಅಸಾಹಾಯಕ ಸ್ತ್ರೀಯರು ಮತ್ತು ಅವರ ಮಕ್ಕಳು ತಪ್ಪಿತಸ್ಥರಿಂದಾಗಿ ಕಷ್ಟ ಅನುಭವಿಸಬೇಕೆಂದು ಯಾವ ಧರ್ಮವೂ ವಿಧಿಸುವುದಿಲ್ಲ. ಎಂದು ರಾಯಭಾರಿಗಳು ನಿವೇದಿಸಿದರು. ಮಹಮ್ಮದಶಾ ಅವರ ವಿಚಾರಗಗಳಿಂದ ಪ್ರಭಾವಿತನಾದ ಹಾಗೂ ವಿಜಯ ನಂತರ ಒಬ್ಬ ಶತ್ರುವನ್ನು ಕೊಲ್ಲವುದಿಲ್ಲ ಎಂದು ಪ್ರತಿಜ್ಞೆಗೈದ"[೧೭]

"ಯುದ್ಧದಲ್ಲಿ ಸೋತ ಬುಕ್ಕರಾಯ ಬಹುಮನಿ ಸುಲ್ತಾನನೊಂದಿಗೆ ಒಪ್ಪಂದವನ್ನು ಮಾಡಿಕೊಂಡು ದೆಹಲಿ ಸಂಗಿತಗಾರರಿಗೆ ಹಣ ಪಾವತಿ ಮಾಡಿದ"[೧೮] ಹಾಗೂ ಮಹಮ್ಮದನಿಗೆ ಅಪಾರ ಪ್ರಮಾಣದ ಕಾಣಿಕೆಯನ್ನು ನೀಡಿದ್ದ. ರಾಯಚೂರನ ದೋಅಬ್ ಪ್ರದೇಶ ಮಹಮ್ಮದನ ವಶವಾಯಿತು. ಈ ಯುದ್ಧದಿಂದ ಅನೇಕ ಜನಸಾಮಾನ್ಯರು ಹಾಗೂ ಸೈನಿಕರು ಸಾವನಪ್ಪಿದ್ದರು. ಕರ್ನಾಟಕದ ಎಷ್ಟೊಂದು ಪ್ರದೇಶಗಳು ಹಾಳುಮಾಡಿದನೆಂದರೆ ಹಲವಾರು ದಶಕಗಳವರೆಗೆ ಅವುಗಳು ತಮ್ಮ ಸ್ವಾಭಾವಿಕ ಜನಸಂಖ್ಯೆಯನ್ನು ಮರಳಿಪಡಿಯಲಿಲ್ಲಾ.

ಹೀಗೆ ಯುದ್ಧ ಕೊನೆಗೊಂಡು ಕೆಲವು ವರ್ಷ ವಿಜಯನಗರ ಮತ್ತು ಗುಲಬರ್ಗಾ ಮಧ್ಯ ಶಾಂತಿ ಏರ್ಪಟ್ಟಿತ್ತು.

**೬) ವಿಜಯನಗರದೊಂದಿಗೆ ಹೋರಾಟ ಕ್ರಿ. ಶ ೧೩೭೫ :**

"ಒಂದನೆ ಮಹಮ್ಮದಶಾಹ ಕ್ರಿ. ಶ ೧೩೭೫ ಎಪ್ರಿಲ್ ೨೧ ರಂದು ತೀರಿಕೊಂಡ ನಂತರ ಅವನ ಮಗ ಅಲ್ಲಾವುದ್ದೀನ್ ಮುಜಾಹಿದ್ ಪಟ್ಟಕ್ಕೆ ಬಂದನು. ಕೃಷ್ಣಾ ಮತ್ತು ತುಂಗಭದ್ರ ನದಿಗಳ ನಡುವಣ ಕೆಲವು ಕೋಟೆಗಳು ಮತ್ತು ಜಿಲ್ಲೆಗಳು ಎರಡು ರಾಜ್ಯಗಳ ವಶದಲ್ಲಿದವು. ಅವು ಸದಾ ಕಚ್ಚಾಟಕ್ಕೆ ಆಸ್ಪದವಾಗುತ್ತಿದ್ದರಿಂದ ಇನ್ನುಮುಂದೆ ರಾಯ ತನ್ನ ಗಡಿಗಳನ್ನು ತುಂಗಭದ್ರ ನದಿಗೆ ಸೀಮಿತಗೊಳಿಸಿಕೊಂಡು ಮತ್ತು ಬಂಕಾಪುರ ಕೋಟೆ ಹಾಗೂ ಇನ್ನು ಕೆಲವು ಊರುಗಳನ್ನು ತನ್ನಗೆ ಒದಗಿಸಬೇಕ್ಕೆಂದು ಸುಲ್ತಾನ ಮುಜಾಹಿದ ಆಜ್ಞೆಪಿಸಿದ"[೧೯]

ಬಂಕಾಪುರ ಎಂದರೆ ಧಾರವಾಡದ ದಕ್ಷಿಣಕ್ಕಿರುವ ಮಹತ್ವ ಕೋಟೆ. ಅದು ವಿಜಯನಗರದಿಂದ ಸಮುದ್ರಕ್ಕಿರುವ ನೇರಮಾರ್ಗದಲ್ಲಿ ಇದ್ದುದರಿಂದ ಅದು ತನ್ನ ವಶಕ್ಕೆ ಬಂದರೆ. ಹಿಂದೂ ವ್ಯಾಪರ ಸ್ಥಗಿತವಾಗುವುದರಿಂದ ದಖ್ಖನಿನ ಪ್ರಭುಗಳು ಅದರ ಮೇಲೆ ಯಾವಾಗಲೂ ಕಾಕದೃಷ್ಟಿ ಇಟದ್ದರು.

ಇದಕ್ಕೆ ಉತ್ತರವಾಗಿ ಬುಕ್ಕರಾಯನು ರಾಯಚೂರ ಮತ್ತು ಮುದಗಲ್ ಎಂದೆಂದೂ ವಿಜಯನಗರ ಮನೆತನಕ್ಕೆ ಸೇರಿದ್ದರಿಂದ ಸುಲ್ತಾನ ಇಡಿ ದೋಅಬ್ ಪ್ರದೇಶ ತೆರವು ಮಾಡಬೇಕ್ಕೆಂದು ಉತ್ತರ ಕಳಿಸಿದ. ಹಾಗೂ ಕೃಷ್ಣಾ ನದಿಯ ನಿಜವಾದ ಗಡಿಯೆಂದು ಬುಕ್ಕ ಘೋಷಿಸಿದ. ಮತ್ತು ಸುಲ್ತಾನ ಮಹಮ್ಮದ ಸೆರೆ ಹಿಡಿದಿದ್ದ ಆನೆಗಳನ್ನು ಮರಳಿ ಕೊಡಬೇಕ್ಕೆಂದು ಕೇಳಿದ.

ಯುದ್ಧ ಸಾರುವುದೆ ಸುಲ್ತಾನನ ಉತ್ತರವಾಗಿತ್ತು. ತಾನೆ ಸೈನ್ಯದ ನೇತೃತ್ವ ವಹಿಸಿ ಹೋರಟ. ಎರಡೂ ನದಿಗಳನ್ನು ದಾಟಿದ ಅದೋನಿಯ ಮುಂದೆ ಬಂದಳಿದ. ರಾಯ ತುಂಗಭದ್ರ ದಡದ ಮೇಲೆ ಬಿಡಾರ ಹೂಡಿರುವುದನ್ನು ಕೇಳಿ ಒಂದು ಸೈನ್ಯ ಪಡೆಯನ್ನು ಕೋಟೆಗೆ ಮುತ್ತಿಗೆ ಹಾಕಲು ಕಳುಹಿಸಿದ ಇನ್ನೊಂದು ಪಡೆಯನ್ನು ತೆಗೆದುಕೊಂಡು ತಾನು ರಾಯ ನಡೆಗೆ ನಡೆದ.

ಸುಲ್ತಾನನ ಮುನ್ನಡೆಯನ್ನು ನೋಡಿ ರಾಯ ಶಿಬಿರವನ್ನು ಬಿಟ್ಟು ಕಾಡುಗುಡ್ಡಗಳನ್ನು ಹಾಯ್ದು ಸೀತ್‌ಬಂದರ್ ರಾಮೇಶ್ವರದತ್ತ ಓಡಿದ. ಕುದುರೆಗಳು ಪ್ರವೇಶಿಸಲಾರದಂತಿದ್ದ ಅರಣ್ಯವನ್ನು ಕತ್ತರಿಸಿ ತನ್ನ ಅಶ್ವದಳಕ್ಕೆ ದಾರಿಮಾಡಿಕೊಳ್ಳುತ್ತ ಸುಲ್ತಾನನು ಅವನ ಬೆನ್ನಟ್ಟಿದ. ರಾಯ ಆರುತಿಂಗಳು ಕಾಲ ಸ್ಥಳದಿಂದ ಸ್ಥಳಕ್ಕೆ ಅಲೆದು ವಿಜಯನಗರಕ್ಕೆ ಹಿಂತಿರುಗಿದ. ಸುಲ್ತಾನ ಅವನ ಹಿಂದೆ ಒಂದು ಸೈನ್ಯ ತುಕಡಿ ಕಳಿಹಿಸಿ ತಾನು ಐದು ಸಾವಿರ ಸೈನಿಕರರೊಂದಿಗೆ ಸೀತ್‌ಬಂದರ್ ಮತ್ತು ರಾಮೇಶ್ವರದ ದೃಶ್ಯ ಆಹ್ಲಾದಿಸಲು ನಡೆದ. ನಂತರ ವಿಜಯನಗರದತ್ತ ಪ್ರಯಾಣ ಬಳಸಿದ. ಬುಕ್ಕರಾಯ ಅವನ ಧೈರ್ಯ ನೋಡಿ ಚಕಿತನಾತ ಹಾಗು ಅವನನ್ನು ತಡೆಯಲು ಸೈನಿಕರನು ಕಳುಹಿಸಿದ. ಸುಲ್ತಾನ ಅವರನ್ನು ಹಿಮ್ಮೆಟ್ಟಿಸುತ್ತ ಮಧ್ಯದಲ್ಲಿ ಬಂದ ದೇವಾಲಯಗಳು ನೆಲಸಮಗೊಳಿಸಿ ಅಮೂಲ್ಯ ಧಾತುಗಳೂ ಮತ್ತು ಮಾಣಿಕ್ಯಗಳನ್ನು ವಶಪಡಿಸಿಕೊಂಡ. ರಾಜಧಾನಿಯ ಮೇಲೆ ದಾಳಿ ಮಾಡಲು ಸುಲ್ತಾನ ತನ್ನ ವ್ಯೂಹ ರಚಿಸಿದ ಹಾಗೂ ಮಹಮ್ಮದ ಅಫಘಾನನೊಂದಿಗೆ ಯುದ್ಧ ಹೂಡಿದನು. "ಮಹಮ್ಮದ ತಡ ಮಾಡದೆ ವಿಜಯನಗರ ಸೈನ್ಯ ಮೇಲೆ ರಬಸದಿಂದ ದಾಳಿ ಮಾಡಿದ. ಮಹಮ್ಮದ ಕುದುರೆ ಮೇಲಿಂದ ನೆಲಕ್ಕುರುಳಿದ. ವೈರಿಗಳು ಅವನನ್ನು ಕೊಲ್ಲುತ್ತಿದ್ದ ಸಮಯಕ್ಕೆ ಸುಲ್ತಾನ ಮುಜಾಹಿದಶಾ ಮಿಂಚಿನ ವೇಗದಲ್ಲಿ ಮುಂದೆಬಂದು ಮಹಮ್ಮದನನ್ನು ಕಾಪಾಡಿ ಪುನ: ಕುದುರೆಯೇರಿಸಿ ನದಿಯಾಚೆಗಿದ್ದ ಸೈನ್ಯ ಸೇರಿಕೊಂಡ. ಯುದ್ಧ ಸುರುವಾಯಿತು ಅದರಲ್ಲಿ ವಿಜಯನಗರ ಸೈನಿಕರು ಸೋತರು. ಆದರೆ ದಾಳಿ ಮಾಡಿದ ಸೈನ್ಯ ಇನ್ನು ಆಯಾಸದಿಂದ ಚೇತರಿಸಿಕೊಂಡಿರಲಿಲ್ಲ. ಆಗ ರಾಯನ ಸಹೋದರ ತನ್ನ ರಾಜದಿಂದ ಇಪ್ಪತ್ತು ಸಾವಿರ ಅಶ್ವದಳ ಅಪಾರ ಕಾಲ್ದಳದೊಂದಿಗೆ ಬಂದು ಯುದ್ಧ ಹೂಡಿದ"[೨೦]

"ಆಗ ಯುದ್ಧ ಘೋರವಾಯಿತು. ಸುಲ್ತಾನ ಸೋಲುವ ಸಂದರ್ಭದಲ್ಲಿ ಸುಲ್ತಾನನ ಚಿಕ್ಕಪ್ಪ ದಾವುದ್‌ಖಾನ್ ಸುಲ್ತಾನ ನೇರವಿಗಾಗಿ ಧನಸುಂದ್ರಮ್‌ದಲ್ಲಿಯ ಠಾಣ್ಯ ಬಿಟ್ಟು ಯುದ್ಧದಲ್ಲಿ ತೊಡಗಿದ.

ಅತ್ಯಂತ ಶೌರ್ಯದಿಂದ ಕಾಪಾಡಿದ ಮಹಮ್ಮದೀಯರು ಪುನ: ಜಯಶಾಲಿಗಳಾದರು."[೨೧] ಆದರೆ ನಂತರದಲ್ಲಿ ವಿಜಯನಗರದವರು ದಾವುದ್ ಖಾನನ ಬಿಟ್ಟು ಹೋದ ಠಾಣ್ಯವನ್ನು ವಶಪಡಿಸಿಕೊಂಡರು. ಸುಲ್ತಾನ ಹಿಂದೆ ಸರಿಯುವ ಮಾರ್ಗದಲ್ಲಿ ಗಂಭೀರ ಅಪಾಯ ಒಡ್ಡಿದ್ದರು ನಂತರ ಅನೇಕ ಕಡೆ ಸುಲ್ತಾನ ಸೈನ್ಯ ಹಿಮ್ಮೆಟಿಸಲಾಯಿತ್ತು. ಆದರೆ ಸುಲ್ತಾನ ಸುಮಾರು ಎಪ್ಪತ್ತುಸಾವಿರ ಸೆರೆಯಾಳುಗಳೊಂದಿಗೆ ಹಿಂದೆ ಸರಿದ.

"ವಿಜಯನಗರದಿಂದ ಹಿಂದೆ ಸರಿದು ಅದೋನಿಯ ಮುಂದೆ ಕುಳಿತು ಒಂಬತ್ತುತಿಂಗಳು ಮುತ್ತಿಗೆ ಹಾಕಿದ. ನಂತರ ಅದು ಯಶಸ್ವಿಯಾಗಲಿಲ್ಲ ಅದರ ಪ್ರಯತ್ನವನ್ನು ಕೈಬಡಲಾಯಿತು."[೨೨] ಸುಲ್ತಾನ ತನ್ನ ಪ್ರದೇಶಗಳಿಗೆ ಮರಳಿದ ಹೀಗೆ ದಂಡಯಾತ್ರೆ ಮುಕ್ತಾಯವಾಯಿತು.

**೭) ಮುದೋಳ ಸಂಸ್ಥಾನದ ಮೇಲೆ ದಾಳಿ ಕ್ರಿ. ಶ ೧೩೯೮ :**

ಎರಡನೇಯ ಮಹಮ್ಮದನ ಮರಣ ನಂತರ ಅವನ ಅಳಿಯ ಹಾಗೂ ಹಸನ್ ಬಹಮನ್ ಷಾನ ಮೊಮ್ಮಗನಾದ ತಾಜ್‌ಉದ್‌ದೀನ್ ಫಿರೋಜ ೧೩೯೭ ರಲ್ಲಿ ಆಡಳಿತಕ್ಕೆ ಬಂದನು.

"ಇವನು ಅಧಿಕಾರಕ್ಕೆ ಬಂದಾಗ ಇವನ ಕಾಲದಲ್ಲಿ ಹಲವಾರು ಬಂಡಾಯಗಳು ನಡೆದವು. ಅವುಗಳಲ್ಲಿ ಸಾಗರದ ಅಧಿಪತಿಯಾದ ಸಿದ್ದುವಿನ ಬಂಡಾಯ ಮುಖ್ಯವಾದುದದು. ಫಿರೋಜನು ಹಲವರ ನೇರವಿನಿಂದ ಸಿದ್ದುನನ್ನು ಕೊಂದು ಮುದೋಳದ ಸಂಸ್ಥಾನ ವಶಪಡಿಸಿಕೊಂಡ ನಂತರ ಮುಧೋಳ ಸಂಸ್ಥಾನ ಮೇಲೆ ಅವನ ಮಗನಾದ ಭೈರೋನಸಿಂಗನನ್ನು ೮೪ ಹಳ್ಳಿಗಳು ಒಳಗೊಂಡ ಮುಧೋಳದ ಜಾಗೀರ್‌ದಾರನಾಗಿ ನೇಮಿಸಿದ"[೨೪] ಈ ರೀತಿಯಾಗಿ ಮುಧೋಳ ಸಂಸ್ಥಾನವು ಫೀರೋಜಷಾಹನ ಆಳ್ವಿಕೆಗೆ ಒಳಪಟ್ಟಿತ್ತು.

**೮) ವಿಜಯನಗರದ ಹರಿಹರನೊಂದಿಗೆ ಕಾಳಗ ಕ್ರಿ. ಶ ೧೩೯೮ ;**

ಬಹಮನಿ ಸುಲ್ತಾನನಾದ ಫಿರೋಜಷಾಹ ವಿಯಜನಗರದ ಎರಡನೇ ಹರಿಹರನ ದಾಳಿ ಎದುರಿಸಬೇಯಿಗಿತ್ತು. ವಿಜಯನಗರ ಅರಸನಾದ ಎರಡನೇ ಹರಿಹರನು ಬಹಮನಿ ಸುಲ್ತಾನರ ಮೇಲೆ ಯುದ್ಧ ಕೈಗೊಂಡ. ಸುಲ್ತಾನನಿಂದ ರಾಯಚೂರು, ಮತ್ತು ಮುದಗಲ್ ಮೇಲೆ ದಾಳಿ ಮಾಡಿದ. ತದನಂತರ ಕೃಷ್ಣಾ ನದಿಯ ಮೇಲೆ ಬಿಡಾರ ಹೂಡಿದ. ಇದರಿಂದ ಕೋಪಿತನಾದ ಫಿರೋಜಷಾಹ ಹರಿಹರನನ್ನು. ಎದುರಿಸಲು ಕೃಷ್ಣಾ ನದಿಯ ಉತ್ತರದ ದಡದ ಮೇಲೆ ಬಿಡಾರ ಹೂಡಿದ. ನದಿಯನ್ನು ದಾಟಿ ವಿಜಯನಗರದ ಸೈನ್ಯವನ್ನು ಎದುರಿಸುವದು ಸುಲ್ತಾನನಿಗೆ ಕಷ್ಟವಾಯಿತ್ತು. "ಸುಲ್ತಾನ ಫಿರೋಜಷಾಹ ಸೈನ್ಯಾಧಿಕಾರಿಗಳೊಂದಿಗೆ ಸಮರದ ಸಮಾಲೋಚನೆ ನಡೆಸಿದ. ಆದರೆ ತನ್ನಗೆ ಸರಿಯನಿಸಿದ ಯಾವ ಸಲಹೆಯೂ ಬರಲಿಲ್ಲ. ಅವನ ನಿಷ್ಠವಂತ ಆಸ್ಥಾನಿಕನಾದ ಕಾಜಿಸಿರಾಜ ಶತ್ರುಗಳ ಬಿಡಾರಕ್ಕೆ ಹೋಗಿ ಅವರನ್ನು ಕೊಲ್ಲುವುದಾಗಿ ಸುಲ್ತಾನನಿಗೆ ಮಾತುಕೊಟ್ಟನು"[೨೫] ಸುಲ್ತಾನ ಅವನ ಕ್ರಮವನ್ನು ಅನುಮೋದಿಸಿದನ್ನು. ಬುಟ್ಟಿ ಹರಗೋರಗಳಿಂದ ತನ್ನ ಏಳು ಜನ ಸ್ನೇಹಿತರೊಂದಿಗೆ

ನದಿಯನ್ನು ದಾಟ್ಟಿದ. "ಕಾಜಿಸಿರಾಜನು ಮತ್ತು ಅವರ ಸಂಗಡಿಗರು ಬಿಕ್ಷುಗಳಂತೆ ವೇಷ ಮರೆಸಿಕೊಂಡು ರಾಯನ ಬಿಡಾರಕ್ಕೆ ಹೋರಾಟರು."[೨೬] ನೃತ್ಯ ಮಾಡುವ ಹುಡುಗಿಯರ ವಾಸಿಸುವ ಸ್ಥಳಕ್ಕೆ ಹೋದಲ್ಲಿ ಕಾಜೆಸಿರಾಜ ಒಬ್ಬ ವೇಶಗಳಿಗೆ ಮರುಳಾದಂತೆ ನಟಿಸಿದ. ಆ ಹುಡುಗಿ ಅತ್ಯಂತ ಬೆಲೆವುಳ್ಳ ಆಭರಣಗಳು ಧರಿಸಿ ರಾಯನ ಬಿಡಾರಕ್ಕೆ ಹೊರಡಲು ಸಿದ್ಧಳಾದಳು. ಕಾಜೆಸಿರಾಜ ತಾನು ಬರುವುದಾಗಿ ತಿಳಿಸಿದ್ದ. ತಾನು ವಾದ್ಯ ನಡಿಸುವುದಾಗಿ ತಿಳಿಸಿದ್ದ. ಕಾಜಿಯ ವಾದ್ಯದಲ್ಲಿ ಹೊಂದಿದ ಪರಿಣಿತಿ ಕಂಡು ಅವಳ ಸಂಗೀತಗಾಯಕರ ಹಾಗೂ ನೃತ್ಯಗಾರರ ಜೊತೆ ಕರೆದುಕೊಂಡು ಹೋದಳು. "ಕಾಜಿ ಮತ್ತು ಅವನ ಸಂಗಡಿಗರು ನೃತಕರಂತೆ ವೇಷ ಮರಿಸಿಕೊಂಡು ಮೂಖಭಿನೇತ್ರರ ಅನುಕರಣ ಮಾಡತೊಡಗಿದ್ದರು. ರಾಯನ ಮಗ ಅವರ ಅಭಿನಯಕ್ಕೆ ಮರಳಾದ. ಅವರು ತಲಾ ಒಂದು ಚೂರಿ ತೆಗೆದು ಡಕ್ಕನ ನಾಡಗಾರನಂತೆ ವಿವಿಧ ಭಂಗಿಗಳಲ್ಲಿ ನೃತ್ಯ ಪ್ರದರ್ಶಿಸಿದರು. ಕಡೆಯಲ್ಲಿ ರಾಯನ ಮಗನ ಮೇಲೆ ಒಮ್ಮೆಲೆ ಧಾವಿಸಿ ಅವನ ಎದ್ದೆಯಲ್ಲಿ ಎರಡು ಚೂರಿ ತಿವಿದರು. ನಂತರ ಅವರ ಸಂಗಡಿಗರ ಮೇಲೆ ಆಕ್ರಮಣ ಮಾಡಿದರು. ಅವನನ್ನು ಕೊಲ್ಲಾಯಿತು."[೨೭] ಬೇಗನೆ ಕೂಗು ಶಿಬಿರದಸುತ್ತ ಹರಡಿತ್ತು. ರಾಯನ ಬಿಡಾರದಲ್ಲಿ ಗೊಂದಲ್ಲ ಉಂಟಾಯಿತು. ಪೂರ್ವವ ನಿರ್ಧಾರದಂತೆ ಸುಲ್ತಾನ ಸುಮಾರು ನಾಲ್ಕುಸಾವಿರ ಸೈನಿಕರು ದೋಣಿ ಮತ್ತು ತೆಪ್ಪಗಳಲ್ಲಿ ನದಿಯನ್ನು ದಾಟಿದರು. ಸುಲ್ತಾನ ಸೈನ್ಯ ಬರವಿಕೆಯ ಭೀತರಾಗಿ ಆಕ್ರಮಣ ಮಾಡುವರೆಗೆ ಕಾಯದೆ ಗೋದಲಗೆಟ್ಟು ಓಡಿದರು. ಬೆಳಗಾಗುತ್ತಲೆ ಫಿರೋಜಷಾ ಇಡಿ ಸೈನ್ಯ ನದಿ ದಾಟಿಸಿದ. ಹಾಗೂ ಶತ್ರು ಶಿಬಿರದ ಮೇಲೆ ಉಗ್ರ ಆಕ್ರಮಣ ಮಾಡಿದ. ಮಗನ ಮರಣದಿಂದ ಗಾಬರಿಯಾದ ರಾಯನು ದುರ್ಬಲ ಪ್ರತಿರೋಧ ಒಡ್ಡಿ ಸೈನ್ಯದೊಂದಿಗೆ ಪಲಾಯುನಗೈದನು. ಸುಲ್ತಾನನಿಗೆ ಶಿಬಿರದಲ್ಲಿ ವಿಘುಲ ಲೂಟಿ ಸಿಕ್ಕಿತು. ಶತ್ರು ಸೈನ್ಯವನ್ನು ವಿಜಯನಗರದವರೆಗೆ ಬೆನ್ನಟ್ಟಿದ. ಅನೇಕ ವಿಜಯನಗರ ಸೈನ್ಯವನ್ನು ಕೊಲೆಮಾಡಲಾಯಿತು.

" ಇದರಿಂದ ಹೆದರಿದ ಹರಿಹರ ಸುಲ್ತಾನನೊಡನೆ ಒಪ್ಪಂದವನ್ನು ಮಾಡಿಕೊಂಡ. ಒಪ್ಪಂದದ ಪ್ರಕಾರ ಹರಿಹರನು ಸುಲ್ತಾನನಿಗೆ ಹತ್ತು ಲಕ್ಷ ವರಹಗಳನ್ನು ನೀಡಿದನು"[೨೮] ವಿಜಯನಗರದ ಮೇಲಾಗುತ್ತಿದ್ದ ಶತ್ರು ದಾಳಿಯನ್ನು ತಡೆಗಟ್ಟಿದನು. ಇದರಿಂದ ಸಧ್ಯಕ್ಕೆ ಎರಡು ರಾಜ್ಯಗಳಲ್ಲಿ ಶಾಂತಿಯುತ ವಾತಾವರಣ ನಿರ್ಮಾಣವಾದಂತಾಯಿತು.

### ೯) ಉತ್ತರದ ಖೇರಲದ ಮೇಲೆ ದಾಳಿ ಕ್ರಿ ಶ ೧೪೦೦

ಫಿರೋಜಷಾನ ಕಾಲದಲ್ಲಿ ನಡೆದ ದಂಗೆಗಳಲ್ಲಿ ಉತ್ತರದ ಖೇರಲದ ದಂಗೆ ಪ್ರಮುಖ್ಯವಾದದ್ದು. "ಅಲ್ಲಿ ಖೇರಲದ ಅರಸ ನರಸಿಂಗನನ್ನು ದಂಗೆಯದ್ದಿದ"[೨೯]

ಸುಲ್ತಾನ ಖೇರಲದ ದಂಗೆಯನ್ನು ಅಡಗಿಸಲು ಹೊರಟ ಎಲಿಚಪುರದಿಂದ ಖೇರಲವನ್ನು ತಲುಪಿ ನರಸಿಂಗನನ್ನು ಸೋಲಿಸಿದ. ನರಸಿಂಗನು ಶರಣಾಗಿ ಫಿರೋಜನೊಂದಿಗೆ ಶಾಂತಿ ಒಪ್ಪಂದ ಮಾಡಿಕೊಂಡ. "ನರಸಿಂಗನು ಸುಲ್ತಾನನಿಗೆ ೪೦ ಆನೆಗಳು ಹಾಗೂ ಅಪಾರ ಪ್ರಮಾಣದ ಕಪ್ಪ

ಕಾಣಿಕೆಯನ್ನು ನೀಡಿದನು."[೩೦] ಈ ದಾಳಿಯಿಂದ ಫಿರೋಜಷಾಹ ಉತ್ತರದಲ್ಲಿ ತನ್ನ ರಾಜ್ಯವನ್ನು ಭದ್ರಪಡಿಸಿಕೊಂಡನ್ನು.

## ೧೦) ತೈಮೂರನ ಆಸ್ಥಾನಕ್ಕೆ ರಾಯಭಾರ ಸಂಬಂಧ ಕ್ರಿ ಶ ೧೪೦೧

ಕ್ರಿ. ಶ ೧೪೦೧ ರಲ್ಲಿ ಫಿರೋಜಷಾನು ತೈಮೂರನ ಆಸ್ಥಾನಕ್ಕೆ ರಾಯಭಾರ ಸಂಬಂಧ ಕಳುಹಿಸಿದ. ಇದಕ್ಕೂ ಮೊದಲು ಕ್ರಿ.ಶ ೧೩೯೮ ರಲ್ಲಿ ಅಮೀರ ತೈಮೂರನು ದೆಹಲಿ ಸುಲ್ತಾನ ನಾಸಿರೋದ್ದಿನ್‌ಷಾನನ್ನು ಸೋಲಿಸಿ ದೆಹಲಿಯನ್ನು ವಶಪಡಿಸಿಕೊಂಡು ತನ್ನ ಮಗನ್ನು ದೆಹಲಿಯ ಅಧಿಪತಿಯಾಗಿ ನೇಮಿಸಿದ. ಆಗ ಫಿರೋಜಷಾ ತೈಮೂರನ ಆಸ್ಥಾನಕ್ಕೆ ಪತ್ರ ಬರೆದು ಅಪಾರ ಪ್ರಮಾಣದ ಕಾಣಿಕೆ ನೀಡಿದನು. ತೈಮೂರಷಾ ಅವುಗಳನ್ನು ಸ್ವೀಕರಿಸಿಕೊಂಡನು. ತೈಮೂರನಿಂದ ದಖ್ಖನ ಗುಜರಾತ ಹಾಗೂ ಮಾಳ್ವಗಳ ರಾಜ್ಯಗಳ ಮೇಲೆ ಅಧಿಕಾರ ಹಕ್ಕನು ಪಡೆದುಕೊಂಡನು.

## ೧೧) ಮುದಗಲ್ ಕಾಳಗ ಕ್ರಿ ಶ ೧೪೦೬

ವಿಜಯನಗರದಲ್ಲಿ ಎರಡನೆಯ ಹರಿಹರನ ಮರಣ ನಂತರ ಅಲ್ಲಿ ಒಂದನೆ ದೇವರಾಯ ಆಡಳಿತಕ್ಕೆ ಬಂದಿದ ಬಹಮನಿಯಲ್ಲಿ ಫಿರೋಜಷಾನು ಆಳ್ವಿಕೆ ಮಾಡುತ್ತಿದ್ದನು.

"ಒಂದನೆ ದೇವರಾಯನು ಮುದುಗಲ್ ಪಟ್ಟಣದ ಒಬ್ಬ ಸುವರ್ಣಕಾರನ ಮಗಳಾದ ಪರ್ತಾಳ ಅವಳು ಉತ್ಕೃಷ್ಟ ಸೌಂದರ್ಯವತಿಯಾಗಿದ್ದಳು. ಅವಳನ್ನು ಪಡೆಯುವ ಹುಚ್ಚು ಸಾಹಾಸಕ್ಕೆ ಕೈಹಾಕಿದರಿಂದ ಈ ಯುದ್ಧ ನಡೆಯಿತು"[೩೧]

ಮುದಗಲ್ ಕೋಟೆಯು ಬಹಮನಿಯ ಫಿರೋಜಷಾನ ಅಧಿನದಲ್ಲಿತ್ತು. ಒಂದನೆ ದೇವರಾಯ ಹುಡುಗಿಯ ಕುಟುಂಬ ಸೇರೆ ಹಿಡಿಯಲು ಮುದಗಲ್ ಕೋಟೆ ಮುತ್ತಿಗೆ ಹಾಕಿದ ಹಾಗೂ ಅಲ್ಲಿ ಕೊಲೆ ಸುಲಿಗೆ ಪ್ರಾರಂಭಿಸಿದರು. ಅದರಲ್ಲಿ ೨೦೦೦ ಜನರು ಮರಣಹೊಂದಿದ್ದರು. ಇದು ಯುದ್ಧಕ್ಕೆ ಕಾರಣವಾಯಿತು.

"ಇದರಿಂದ ಕೋಪಿತನಾದ ಸುಲ್ತಾನ ಫಿರೋಜಷಾ ದೊಡ್ಡ ಸೈನ್ಯದೊಂದಿಗೆ ಬಂದು ದೇವರಾಯನ ಸೈನ್ಯ ಹಿಮ್ಮಟಿಸಿದ. ದೇವರಾಯ ಕೋಟೆಯಲ್ಲಿ ಅಡಗಿಕೊಂಡನು ಫಿರೋಜಷಾಹನ ಸೈನ್ಯ ವಿಜಯನಗರಕ್ಕೆ ಬಂದು ನಗರ ಮೇಲೆ ಆಕ್ರಮಣ ಮಾಡಲಾಯಿತು. ಸುಲ್ತಾನ ಕೇಲವು ಬೀದಿಗಳನ್ನು ವಶಪಡಿಸಿಕೊಂಡನು. ಅಲ್ಲಿಯ ಜನ ತ್ರೀವ ಪ್ರತಿರೋಧ ವ್ಯಕ್ತಪಡಿಸಿದರಿಂದ ಫಿರೋಜಷಾ ಸ್ವಲ್ಪ ಹಿಂದೆಸರಿದ. ಈ ಸಮಯದಲ್ಲಿ ಸುಲ್ತಾನ ಫಿರೋಜಷಾನ ಕೈಗೆ ಒಂದು ಬಾಣ ಗಾಯ ಮಾಡಿತು. ಆದರೆ ಅವನು ಕುದುರೆಯಿಂದ ಇಳಿಯಲಿಲ್ಲ, ಬಾಣವನ್ನು ಕಿತ್ತು ಕೈಯನ್ನು ಬಟ್ಟೆಯಿಂದ ಕಟ್ಟಿಕೊಂಡ"[೩೨]

ಅಹ್ಮದ್‌ಖಾನ ಮತ್ತು ಖಾನಖಾನದಂಡಧಿಕಾರಿಗಳ ಸಹಾಯದಿಂದ ನಾಲ್ಕು ತಿಂಗಳವರೆಗೆ ರಾಜಧಾನಿ ಮುತ್ತಿಗೆ ಹಾಕಿದ ಸುಲ್ತಾನ ಸೈನಿಕರು ವಿಜಯನಗರದ ದಕ್ಷಿಣಕ್ಕಿರುವ ನಾಡನ್ನು ಹಿಂಸಿಸಿದರು

ಮತ್ತು ಹಾಳುಮಾಡಿದರು. ಬಂಕಾಪುರ ಮೇಲೆ ದಾಳಿ ಇಟ್ಟು ಬಂಕಾಪುರ ವಶವಾಯಿತು. ವಿಜಯನಗರ ಸೈನ್ಯ ಸಂಪೂರ್ಣ ಸೋತು ಹೋಯಿತು. ದೇವರಾಯ ಆಗ ಶಾಂತಿಗಾಗಿ ವ್ಯವಹರಿಸಲಾರಂಭಿಸಿದ ಮತ್ತು ತೀರ ಅವಮಾನಕರ ಕರಾರುಗಳನ್ನು ಒಪ್ಪಿಕೊಂಡ. "ಈ ಒಪ್ಪಂದದ ಪ್ರಕಾರ ಸುಲ್ತಾನನಿಗೆ ತನ್ನ ಮಗಳನ್ನು ವಿವಾಹ ಮಾಡಿಕೊಡುವುದಲ್ಲದೆ ಬಂಕಾಪುರವನ್ನು ಶಾಶ್ವತವಾಗಿ ಬಿಟ್ಟು ಕೊಡಲು ಒಪ್ಪಿದನು. ಅಷ್ಟೆ ಅಲ್ಲದೆ ಅಪಾರ ಸಂಪತ್ತು ಹತ್ತು ಲಕ್ಷ ವರಹ ಐದು ಮಣ ಮುತ್ತು ಒಂದು ಸಾವಿರ ಸ್ತ್ರೀ ಪುರುಷ ಗುಲಾವರನ್ನು ಕೊಡುವುದಾಗಿ ಒಪ್ಪಿಂದ"[೩೩] ಯುದ್ಧದ ನಂತರ ಅಪಾರ ಸಂಪತ್ತಿನೊಂದಿಗೆ ಫಿರೋಜಷಾಹ ರಾಜ್ಯಧಾನಿಗೆ ಮರಳಿದ. "ಲಾವಣ್ಯವತಿ ಪರ್ತಾಲಳನ್ನು ರಾಜಧಾನಿಗೆ ಕರೆಸಿದ. ಅವಳ ಸೌಂದರ್ಯ ಎಲ್ಲ ವದಂತಿಗಳನ್ನು ಮೀರಿದುದಾಗಿರುವುದನ್ನು ಕಂಡು ಅವಳನ್ನು ತನ್ನ ಜೇಷ್ಠ ಪುತ್ರ ಹಸನ್‌ಖಾನನಿಗೆ ಮದುವೆ ಮಾಡಿಕೊಟ್ಟ"[೩೪]

**೧೨) ಗೊಂಡ್ವಾನಾ ಪ್ರದೇಶದ ಮೇಲೆ ದಾಳಿ ಕ್ರಿ. ಶ ೧೪೧೨ :**

ಫಿರೋಜಷಾನ ಕಾಲದಲ್ಲಿ ನಡೆದ ದಂಗೆಗಳಲ್ಲಿ ಗೊಂಡ್ವಾನದ ರಾಜ್ಯಪಾಲನಾದ ಮಾಹೂರ್‌ನ ದಂಗೆ ಪ್ರಮುಖವಾದದ್ದು

ಮಹೂರನ ದಂಗೆ ಅಡಗಿಸಲು ಫಿರೋಜಷಾ ಗೊಂಡ್ವಾನಾ ಪ್ರದೇಶಗಳ ಮೇಲೆ ದಾಳಿ ಇಟ್ಟು ದಕ್ಷಿಣ ಗೊಂಡ್ವಾನಾ ಪ್ರದೇಶವನ್ನು ವಶಪಡಿಸಿಕೊಂಡ. ಸೋತ ಮಾಹೂರ್ ಫಿರೋಜಷಾಹನೊಂದಿಗೆ ಒಫ್ಪಂದ ಮಾಡಿಕೊಂಡ. "ಈ ಒಪ್ಪಂದದಂತೆ ೩೦೦ ಆನೆ ಹಾಗೂ ಅಪಾರ ಪ್ರಮಾಣದ ಸಂಪತ್ತನ್ನು ಕೊಳ್ಳೆ ಹೊಡೆದು ರಾಜಧಾನಿಗೆ ಮರಳಿದ"[೩೫]

**೧೩) ಪೂರ್ವದ ರಾಜ್ಯಗಳ ಮೇಲೆ ದಾಳಿ ಕ್ರಿ ಶ ೧೪೧೭ :**

ಆರಂಭಿಕ ಸಾಧನೆಗಳಿಂದಾಗಿ ಮಹತ್ವಾಕಾಂಕ್ಷೆಯಾದ ಫಿರೋಜನು ಇಡೀ ದಖ್ಖನ್ ಪ್ರದೇಶವನ್ನು ತನ್ನ ಹತೋಟಿಗೆ ತೆಗೆದು ಕೊಳ್ಳವ ಆಸೆ ಹೊಂದಿದ. "ಕೊಂಡವೀಡಿನ ಪೆದ್ದಕೂಮಟಿವೆಮನ ಸಹಾಯದಿಂದ ರಾಜಮುಂಡ್ರಿಯ ಮೇಲೆ ದಾಳಿ ಮಾಡಿದ".[೩೬] ಅಲ್ಲಿ ಕಾಕತೀಯ ರಾಜ ಕತ್ಯಾವೇಮನು ಆಳ್ವಿಕೆ ಮಾಡುತ್ತಿದ್ದನು

ಸಾಮ್ರಾಜ್ಯ ವಿಸ್ತರಣೆ ಉದ್ದೇಶದಿಂದ ಕಾಕತೀಯರಾಜನನ್ನು ಸೋಲಿಸಿ ರಾಜಮುಂಡ್ರಿಯನ್ನು ಹಿಡಿದನು. ಅಪಾರ ಸಂಪತ್ತನು ಸುಲಿದನು "ನಂತರ ಸುಲ್ತಾನನು ಪಾನಗಲ್ಲ ಕೋಟೆಯನ್ನು ಎರಡು ವರ್ಷಗಳ ಕಾಲ ಮುತ್ತಿಗೆ ಹಾಕಿದ"[೩೭] ಆದರೆ ಸೈನಿಕರು ಮತ್ತು ಕುದುರೆಗಳು ಎರಡರಲ್ಲೂ ಅಂಟುರೋಗ ಹರಡಿತು. ಈ ಸಂದಿಗ್ಧ ಸಮಯದಲ್ಲಿ ದೇವರಾಯ ತನ್ನ ಸೈನ್ಯ ಜಮಾಯಿಸಿದ ಹಾಗೂ ತೆಲಂಗಾಣದ ವೇಲಮರ ಮತ್ತು ಸುತ್ತಮುತ್ತಲಿನ ರಾಜರಿಂದ ಸಹಾಯ ಪಡೆದು ಅಪಾರ ಸೈನ್ಯದೊಂದಿಗೆ ಫಿರೋಜಷಾನನ್ನು ಸೋಲಿಸಿದ. ಪಾನಗಲ್ಲ ಕೋಟೆಯನ್ನು ಆಕ್ರಮಿಸಿಕೊಂಡ ವೇಲಮರು ಮೇಡಕನ್ನು ಸುಲ್ತಾನನಿಂದ ವಶಪಡಿಸಿಕೊಂಡರು.

**೧೪ ವಿಜಯನಗರದ ಎರಡನೇ ಹರಿಹರನ ದಾಳಿ ಕ್ರಿ ಶ ೧೪೮೯ :**

ಬಹಮನಿ ಸುಲ್ತಾನ್ ಫಿರೋಜಷಾಹನ ಆಳ್ವಿಕೆಯ ಕೊನೆಗಾಲದಲ್ಲಿ ವಿಜಯನಗರದ ಎರಡನೆ ದೇವರಾಯನ್ನು ಕಲ್ಬುರ್ಗಾದ ಮೇಲೆ ದಂಡಯಾತ್ರೆ ಕೈಗೊಂಡನು.

ಇದಕ್ಕೆ ಕಾರಣ ಫಿರೋಜಷಾನು ತೆಲಂಗಾಣ ಮೇಲೆ ದಾಳಿ ಮಾಡಿದ. ಅದು ಯಶಸ್ವಿಯಾಗಿರಲಿಲ್ಲ. ಇದನ್ನು ಕಂಡು ಎರಡನೆಯ ದೇವರಾಯ ಬಹಮನಿಯ ಮೇಲೆ ಆಕ್ರಮಣ ಮಾಡಿದ.

ವಿಜಯನಗರದ ಸೈನಿಕರು ಕುದುರೆ, ಕಾಲ್ದಳ ಮತ್ತು ಆನೆಗಳೊಂದಿಗೆ ಅವನ ವಿರುದ್ಧ ನಡೆದರು. ತನ್ನ ಸೈನಿಕರು ಕೆಳಮಟ್ಟದವರೆಂದು ಭಾವಿಸಿದರೂ ಫಿರೋಜಷಾಹ ಯುದ್ಧಮಾಡಿದ.

ಬಹಮನಿ ಸೈನ್ಯದ ನೇತೃತ್ವ ವಹಿಸಿದ್ದ ಮೀರ ಫಜಲ್ ಉಲ್ಲಾಹನು ವಿಜಯನಗರ ಸೈನ್ಯದ ಮೇಲೆ ರಬಸದ ಆಕ್ರಮಣ ಮಾಡಿದ. ಮಧ್ಯವ್ಯೂಹ ಒಡೆದುಹೋಯಿತು. ಆದರೆ ಕೊನೆಯಲ್ಲಿ ವಿಜಯನಗರ ಸೈನಿಕರು ವೀರಾವೇಶದಿಂದ ಹೋರಾಡಿ ಬಹಮನಿ ಸೈನ್ಯವನ್ನು ಸೋಲಿಸಿದರು.

ಸುಲ್ತಾನ ಸೋತ ಮತ್ತು ಬಹಳ ಪ್ರಯಾಸಪಟ್ಟು ಅತ್ಯಂತ ಆಶ್ಚರ್ಯಕಾರರ ಮತ್ತು ಧೀರ ಪ್ರಯತ್ನಗಳಿಂದ ರಣರಂಗದಿಂದ ಪಾರಾಗಿ ಹೋದ. ವಿಜಯನಗರ ಸೈನ್ಯ ಬಹಮನಿಯರನ್ನು ಸಾಮೂಹಿಕ ಸಂಹಾರ ಮಾಡಿದರು ಮತ್ತು ರಣರಂಗದಲ್ಲಿ ಜಗಲಿ ಕಟ್ಟಿ ಅವರ ತಲೆಗಳನ್ನು ಅದರ ಮೇಲಿಟ್ಟರು. ಅವರು ಬಹಮನಿಯರನ್ನು ಅವರ ನಾಡಿನೊಳಗೆ ಬೆನ್ನಟ್ಟಿದರು. ಅನೇಕ ಸ್ಥಳಗಳನ್ನು ವಶಪಡಿಸಿಕೊಂಡರು. ಅನೇಕ ಮಸೀದಿಗಳನ್ನು ಮತ್ತು ಪವಿತ್ರ ಸ್ಥಳಗಳನ್ನು ಒಡೆದು ಹಾಕಿದರು. ಜನರನ್ನು ದಯೆಯಿಲ್ಲದೆ ಕೊಚ್ಚಿ ಹಾಕಿದರು. ತಮ್ಮ ಕೃತ್ಯಗಳಿಂದ ಅವರು ಯುಗಗಳಿಂದಲೂ ಸಂಚಯಿತವಾಗಿದ್ದ ದ್ವೇಷ ಮತ್ತು ಕೋಪಗಳ ಹೊರೆ ಇಳಿಸುತ್ತಿರುವಂತೆ ತೋರಿತು. ಅಪಾಯಸ್ಥಿತಿಯ ತುರ್ತಿನಲ್ಲಿದ್ದ ಸುಲ್ತಾನ ಫಿರೋಜಷಾಹ ಗುಜರಾತದ ಸುಲ್ತಾನನ ನೆರವು ಕೋರಿದ. ಅವನು ಅದೇ ಸಮಯದಲ್ಲೆ ಸಿಂಹಾಸನವೇರಿದ್ದರಿಂದ ಸಹಾಯ ನೀಡಿದವನಾಗಿದ್ದ.

ವಿಜಯನಗರ ಕೈಯಲ್ಲಿ ಸೋತ ನಂತರ ಸುಲ್ತಾನನ ರಾಜ್ಯದಲ್ಲಿ ಅನೇಕ ಗಲಭೆಗಳುಂಟಾದವು. ಫಿರೋಜಷಾಹನ ಸಹೋದರ ಅಹಮ್ಮದ್‌ಷಾಹ ಸುಲ್ತಾನ ಸೈನ್ಯದ ಒಂದು ಪಡೆಯನ್ನು ತನ್ನ ಕಡೆಗೆ ಸೆಳೆದುಕೊಂಡು ರಾಜಧಾನಿ ಮುತ್ತಿದ್ದ. ಅದೇ ವರ್ಷ ಸುಲ್ತಾನ ಫಿರೋಜಷಾಹ ೧೪೨೨ ರಲ್ಲಿ ಮರಣಹೊಂದಿದ.

**೧೫) ರಾಜಧಾನಿಯ ವರ್ಗಾವಣೆ :**

ಕ್ರಿ ಶ ೧೪೨೨ ರಲ್ಲಿ ಫಿರೋಜಷಾನ ಮರಣ ನಂತರ ಒಂದನೆ ಶಿಹಾಬುದ್ದೀನ್ ಅಹಮದ್‌ಷಾ ಸಿಂಹಾಸನಕ್ಕೆ ಬಂದ ಸಮಯದಲ್ಲಿ ಬಹಮನಿಯ ಇತಿಹಾಸದಲ್ಲಿ ಬೀದರ ಯುಗ ಆರಂಭವಾಗುತ್ತದೆ. ಇವನು ಗುಲಬರ್ಗಾದಿಂದ ರಾಜಧಾನಿಯನ್ನು ಬೀದರಗೆ ವರ್ಗಾಯಿಸಿದ್ದ. ಇತ ರಾಜಧಾನಿಯನ್ನು ವರ್ಗಾಯಿಸಲು ಪ್ರಮುಖ ಕಾರಣವೆಂದರೆ ರಾಜಧಾನಿಯಾದ ಗುಲಬರ್ಗಾದಲ್ಲಿ ಆರಂಭದಿಂದಲೂ

ರಾಜ್ಯದ ವಿರುದ್ಧ ಒಳ ಸಂಚುಗಳು, ಪಿತೂರಿಗಳು, ಕೊಲೆಗಳು ಇನ್ನಿತರ ಅಂತ:ಕಲಹಗಳು ನಡೆಯುತ್ತಿದ್ದವು. ಈ ವೇಳೆಯಲ್ಲೆ ಸುಲ್ತಾನನ ಗುರುವಾದ ಹಜರತ ಗೇಸುದರಾಜನ ಮರಣ ಸಂಭವಿಸಿತು. ತನ್ನ ಗುರುವಿನ ಕೊಲೆಗೆ ಇಂತಹ ಪರಿಸ್ಥಿತಿಗಳೆ ಪರಿಣಾಮವೆಂದೂ ಅಹಮ್ಮದ್ ಭಾವಿಸಿದ. ಅಲ್ಲದೆ ಗುಲಬರ್ಗಾ ರಾಜ್ಯದ ಮೂಲೆಯಲ್ಲಿತ್ತು. ಆದುದರಿಂದ ರಾಜ್ಯದ ಮಧ್ಯದಲ್ಲಿದ್ದು ಹೆಚ್ಚು ಎತ್ತರದಲ್ಲಿದ್ದ ಉತ್ತಮ ತಂಪು ಹವಾಮಾನ ಹೊಂದಿದ್ದ ಬೀದರಗೆ ರಾಜ್ಯದ ರಾಜಧಾನಿ ವರ್ಗಾಯಿಸಿದನು.

ಈ ಘಟನೆ ೧೪೨೪ ರಂದ ೧೪೨೭ರ ಮಧ್ಯನಡೆದಿರಬೇಕ್ಕೆಂದು ಹೇಳಲಾಗಿದೆ. ತನ್ನ ಹೊಸ ರಾಜಧಾನಿಯನ್ನು ಮಹಮದಾಬಾದ ಬೀದರ ಎಂದುಕರೆದನು.

**೧೬) ಎರಡನೇ ದೇವರಾಯನೊಡನೆ ಕಾಳಗ ಕ್ರಿ. ಶ ೧೪೨೩ :**

ಸುಲ್ತಾನ ಒಂದನೆ ಅಹಮ್ಮದಷಾನು ತಾನು ಅಧಿಕಾರಕ್ಕೆ ಬಂದ ಮೇಲೆ ವಿಜಯನಗಂದ ಮೇಲೆ ಆಕ್ರಮಣ ಕೈಗೊಂಡ. ವಿಜಯನಗರದಲ್ಲಿ ಎರಡನೇ ದೇವರಾಯ ಆಳ್ವಿಕೆ ಮಾಡುತ್ತಿದ್ದನ್ನು.

ಈ ಹಿಂದೆ ವಿಜಯನಗರ ಸೈನ್ಯವು ಫಿರೋಜಷಾನನ್ನು ಸೋಲಿಸಿ ಅಪಾರ ಹಾನಿ ಉಂಟುಮಾಡಿತು. ಅವರ ಮೇಲೆ ಸೇಡು ತೀರಿಸಿಕೊಳ್ಳಲು ಸೈನ್ಯ ಬಲಪಡಿಸಿಕೊಂಡು ಎಲ್ಲಾ ಸಿದ್ದತೆ ಮಾಡಿಕೊಂಡು  ಆಕ್ರಮಣ ಘಡಿದನು.

ವಿಜಯನಗರದ ಅರಸನಾದ ಎರಡನೆಯ ದೇವರಾಯನು ಸಹ ವಾರಂಗಲ್ಲಿನ ಸಹಾಯ ಪಡೆದು ತುಂಗಭದ್ರ ದಡದ ಮೇಲೆ ಬಿಡಾರಹೂಡಿದರು. ವಿಜಯನಗರದ ಬಿಡಾರದ ಎದುರುಗಡೆ ನದಿಯ ಉತ್ತರ ದಡದ ಮೇಲೆ ಸುಲ್ತಾನನು ಬಂದು  ಸುತ್ತುಗಟ್ಟಿ ಪಾಳೆರಚಿಸಿದ. "ವೈರಿಗಳ ಕಾಲ್ದಳ ರಾತ್ರಿ ಆಕ್ರಮಣ ಮಾಡದಂತೆ ತಡೆಯಲು ರೋಮ್ (ಯೂರೋಪದಲ್ಲಿ ಟರ್ಕಿ)ನ ರೀತಿಯಲ್ಲಿ ಅವನು ತನ್ನ ಬಿಡಾರವನ್ನು ವಾಹನ  (ಬಂಡಿಗಳು ಮತ್ತು ಸರಕು ಬಂಡಿಗಳು) ಗಳಿಂದ ಸುತ್ತುವರಿಸಿದ್ದನು"[೩೮] ಅಲ್ಲಿ ಅವನು ನಲವತ್ತು ದಿನಗಳು ನಿಂತ ಆ ಮೇಲೆ ಒಂದು ನಾಟಕೀಯ ಘಟನೆ ಜರುಗಿತು. ಮಹಮ್ಮದೀಯರು ಅಶ್ವದಳ ನದಿಯನ್ನು ದಾಟಿತು. ರಾಯನ ನಾಡಿನ ಮೇಲೆ ಆಕ್ರಮಣ ಮಾಡಿತು ಮತ್ತು ಸುಲ್ತಾನ ನೇರವಾಗಿ ಮೇಲೆ ಬೀಳಲು ನಿರ್ಧರಿಸಿದ. ಇದರಿಂದ ವಾರಂಗಲ್ಲಿನ ಸೈನಿಕರು ರಾಯನ ಕೈಬಿಟ್ಟರು ಹಾಗೂ ಹಿಂದೆ ಸರಿದರು. "ರಾತ್ರಿಯ ವೇಳೆಯಲ್ಲಿ ದೂರದಲ್ಲಿದ ನದಿಯನ್ನು ದಾಟಿದ ಲೋದಿಖಾನ್, ಅಲಮ್‌ಖಾನ ಮತ್ತು ದಿಲಾವರ್‌ಖಾನ  ನಸುಕಿನಲ್ಲಿ  ಶತ್ರು ಬಿಡಾರದ ಹೊರವಲಯ ತಲುಪಿದರು. ಶಿಬಿರದ ಹತ್ತಿರ ಇದ್ದ ದಟ್ಟ ಕಬ್ಬಿನ  ಉದ್ಯಾನದಲ್ಲಿ ಕೇಲವೆ ಜನರೊಂದಿಗೆ ರಾಯಮಲಗಿದ್ದ. ಸುಲ್ತಾನ ಒಂದು ಪಡೆ  ಕೊಳ್ಳೊಗಾಗಿ ಉದ್ಯಾನ ಪ್ರವೇಶಿಸಿದರು.

ಇದನ್ನು ಕಂಡು ದೇವರಾಯ ಪಲಾಯನಗೈದನು"[೩೯] ಸುಲ್ತಾನ ಅಹಮ್ಮದಷಾ ನದಿಯನ್ನು ದಾಟಿದನು.  ದೇವರಾಯ ಕಣ್ಮರೆಯಾದ ಕುಗೂ ಬಿಡಾರ ತುಂಬಾ ಹರಡಿತು ವಿಜಯನಗರ ಸೈನಿಕರು ಚದುರ ತೊಡಗಿದರು. ಸುಲ್ತಾನ ಬಿಡಾರ ಪ್ರವೇಶಿಸಿದ ದೇವರಾಯ ತನ್ನ ಸೈನಿಕರೊಂದಿಗೆ ವಿಜಯ ನಗರಕ್ಕೆ ಮರಳಿದ.

ಅಹಮ್ಮದಷಾ ನಗರದ ಮುತ್ತಿಗೆ ಹಾಕಿದ ಅಷ್ಟಕ್ಕೆ ಮಾತ್ರ ತೃಪ್ತನಾಗದೆ ಬಯಲು ಸೀಮೆಯಲ್ಲಿ ದಂಡು ನುಗ್ಗಿಸಿ ದಯೆಯಿಲ್ಲದೆ ಪುರುಷರು, ಮಹಿಳೆಯರು ಮತ್ತು ಮಕ್ಕಳನ್ನು ಕೊಂದು ಹಾಕಿದ. ಕೊಲ್ಲಲ್ಪಟವರ ಸಂಖ್ಯೆ ಇಪ್ಪತ್ತು ಸಾವಿರ ತಲುಪಿತ್ತು. ಅವನು ಮೂರು ದಿನ ನಿಂತು ತನ್ನ ರಕ್ತಪಾತ ಕಾರ್ಯದ ನಿಮಿತ್ತ ಉತ್ಸವ ಆಚರಿಸಿದ ಅವನು ಮೂರ್ತಿಯಿರುವ ದೇವಾಲಯಗಳನ್ನು ಒಡೆದು ಹಾಕಿದ ಮತ್ತು ಬಾಹ್ಮಣರ ವಿದ್ಯಾಲಯಗಳನ್ನು ನಾಶಪಡಿಸಿದ.

"ಸುಲ್ತಾನ ತನ್ನ ಶಿಬಿರದಿಂದ ಒಂದು ದಿನ ಬೇಟೆಯಾಡಲು ಹೋದಾಗ ಪ್ರಾಣಿಯನ್ನು ಬೆನ್ನಟ್ಟುವ ಆತುರದಲ್ಲಿ ತನ್ನ ಸೈನಿಕರಿಂದ ಬೇರ್ಪಟ್ಟು ತನ್ನ ಬಿಡಾರದಿಂದ ದೂರ ಬಂದಿದನು. ಸುದ್ದಿ ತಿಳಿದ ವಿಜಯನಗರ ಸೈನ್ಯ ಅವನ್ನು ಹಿಡಿಯಲು ಧಾವಿಸಿದರು. ಬೆಚ್ಚಿದ ಸುಲ್ತಾನ ಅಲ್ಲಿಂದ ಓಡತೊಡಗಿದ್ದ ವಿಜಯನಗರ ಸೈನಿಕರು ಅವನನ್ನು ಬೆನ್ನಟ್ಟಿದರು. ಈ ಸಂದಿಗ್ಧ ಸಮಯಕ್ಕೆ ಅಬ್ದುಲ್ ಖಾದರ್ ಅಲ್ಲಿಗೆ ಬಂದು ಸುಲ್ತಾನ ಕಾಪಾಡಿದ. ಸುಲ್ತಾನ ಅಬ್ದುಲ್ ಖಾದಿರನ ಜೊತೆಗೂಡಿ ವೈರಿಗಳ ಮೇಲೆ ಮುಗಿಬಿದ್ದ. ಧೀರ್ಘ ಹೋರಾಟ ನಂತರ ವೈರಿಗಳನ್ನು ರಣರಂಗದಿಂದ ಹೊಡೆದೋಡಿಸಲಾಯಿತ್ತು"[೮೦]

ಈ ಘಟನೆಯ ನಂತರ ಅಹಮ್ಮದಷಾ ಇಡಿ ದೇಶವನ್ನು ನಾಶಗೊಳಿಸಬೇಕ್ಕೆಂದು ವಿಜಯನಗರಕ್ಕೆ ಬಂದ ಹಾಗೂ ಅದರ ನಿವಾಸಿಗಳಿಗೆ ಕಷ್ಟವಾಗುವ ರೀತಿಯಲ್ಲಿ ಕೋಟೆಯ ಸುತ್ತ ಸುತ್ತಗಟ್ಟಿ ತಡೆಯೊಡ್ಡಿದ. ಆಗ ದೇವದರಾಯ ತನ್ನ ಜನರನ್ನು ಉಳಿಸಲು ಸುಲ್ತಾನನಿಗೆ ರಾಯಭಾರಿಗಳನ್ನು ಕಳಿಸಿ ಶಾಂತಿಗೆ ಮುಂದಾದನು. ಅದಕ್ಕೆ ಸುಲ್ತಾನನು ಇದುವರೆಗೆ ಕೊಡಲು ಅಲಕ್ಷಿಸಲಾಗಿದ್ದ ಎಲ್ಲಾ ವರ್ಷಗಳ ಕಪ್ಪವನ್ನು ದೇವರಾಯ ಅತ್ಯುತ್ತಮ ಆನೆಗಳ ಮೇಲೆ ಹೇರಿ ತನ್ನ ಮಗನ ನೇತೃತ್ವದಲ್ಲಿ ಎಲ್ಲಾ ರಾಜ ಲಾಂಛನಗಳೊಂದಿಗೆ ಸುಲ್ತಾನನ ಬಿಡಾರಕ್ಕೆ ಕಳಿಸಿ ಕೊಡಬೇಕೆಂದು ಷರತ್ತಿನ ಮೇಲೆ ಒಪ್ಪಂದ ಒಪ್ಪುವದ್ದಾಗಿ ತಿಳಿಸಿದ. ಅದನ್ನು ನಿರಾಕರಿಸಲಾಗದ ದೇವರಾಯ ಬೇಡಿಕೆಯನ್ನು ಒಪ್ಪಿ ತನ್ನ ಮಗನನ್ನು ಸಂಪತ್ತು ಬೆಲೆಯುಳ್ಳ ಚರ ಆಸ್ತಿ ಹೇರಿದ ಮೂವತ್ತು ಪ್ರಿಯವಾದ ಆನೆಗಳೊಂದಿಗೆ ಕಳಿಸಿಕೊಟ್ಟ. ಸುಲ್ತಾನ ಅವುಗಳನ್ನು ಪಡೆದುಕೊಂಡು ಕೃಷ್ಣಾ ನದಿಯನ್ನು ದಾಟಿ ರಾಜಧಾನಿಗೆ ಮರಳಿದ.

**೧೭) ವಾರಂಗಲ್ ಮೇಲೆ ದಾಳಿ ಕ್ರಿ ಶ ೧೪೨೪ :**

ಸುಲ್ತಾನ ಅಹಮ್ಮದಷಾನು ವಿಜಯನಗರ ದಂಡಯಾತ್ರೆಯಿಂದ ಮರಳಿದ ನಂತರ ರಾಜಧಾನಿಯಲ್ಲಿ ಭೀಕರ ಕ್ಷಾಮ ಬಿದ್ದಿತು. ಇದರಿಂದ ಸುಲ್ತಾನ ವಾರಂಗಲನ ಅರಸನನ್ನು ಕಪ್ಪ ಕಾಣಿಕೆ ಕೊಡುವಂತೆ ಒತ್ತಾಯಿಸಿದ. ತೆಲಂಗಾಣದ ಅರಸ ಅನ್ನಪೊಟ್ಟ ವೇಲಮನು ಕಪ್ಪವನ್ನು ಸಲ್ಲಿಸದೆ ಹೋದನು

ಸುಲ್ತಾನ ತೇಲಂಗಾಣ ಮತ್ತು ವಾರಂಗಲ್ ಪ್ರದೇಶಗಳ ಮೇಲೆ ದಾಳಿ ಮಾಡಿ ಗೋಲ್ಕೂಂಡ ಕೋಟಿ ವಶಪಡಿಸಿಕೊಂಡ. ಸುಲ್ತಾನ ತೆಲಂಗಾಣದ ಮೇಲಿನ ಯುದ್ಧದಲ್ಲಿ ಸಂಪೂರ್ಣವಾಗಿ ಯಶಸ್ವಿಯಾದನು. ಹಿಂದೂ ರಾಜಮನೆತನ ಪೂರ್ತಿಯಾಗಿ ಮತ್ತು ಶಾಶ್ವತವಾಗಿ ನಾಶವಾಯಿತ್ತು.

"ವಾರಂಗಲನ ರಾಜನಾಗಿದ್ದ ಅನ್ನಾಪೊಟ್ಟ ವೇಲಮನನ್ನು ತೆಗೆದು ಹಾಕಿ ಅಬ್ದುಲ್ ಲತೀಫ ಖಾನನಿಗೆ ವಹಿಸಿಕೊಟ್ಟನು."[೪೧]

**೧೮) ಉತ್ತರದ ಮಾಹೂರ್‌ನ ಮೇಲೆ ದಾಳಿ ಕ್ರಿ ಶ ೧೪೨೬ :**

ಅಹಮದ್‌ಷಾನ ಕಾಲದಲ್ಲಿ ಉತ್ತರದಲ್ಲಿ ಮಾಹೂರ್‌ನ ದುರ್ಗಾಧಿಪತಿ ಬಂಡಾಯವೆದ್ದ ಈ ಪ್ರದೇಶ ಬೆಟ್ಟಗುಡ್ಡ ಮತ್ತು ನದಿಗಳಿಂದ ಕೂಡಿದರಿಂದ ಶತ್ರುವನ್ನು ಸೋಲಿಸುವುದು ಕಷ್ಟವಾಯಿತು.

ಮಾಹೂರನು ಸುಲ್ತಾನ ಸೇನೆಯ ಮೇಲೆ ಗೆರಿಲ್ಲಾ ಯುದ್ಧ ತಂತ್ರಗಳನ್ನು ಅನುಸರಿಸಿ ಹೋರಾಡಿದ. ಅಹಮದಷಾನು ತನ್ನ ಮಗ ರಾಜಕುಮಾರ ಅಲ್ಲಾವುದ್ದೀನ್‌ಗೆ ಕಳುಹಿಸಿ ಅವರ ದಂಗೆಯನ್ನು ದಮನ ಮಾಡಲಾಯಿತ್ತು. ಆದರೆ ಬಹಮನಿ ಸೈನ್ಯ ನಿರೀಕ್ಷಿತ ಜಯ ಪಡೆಯಲು ಸಾಧ್ಯವಾಗಲಿಲ್ಲ.

**೧೯) ಗೊಂಡ್ವಾನಾ ಪ್ರದೇಶದ ಮೇಲೆ ದಾಳಿ ಕ್ರಿ ಶ ೧೪೩೦ :**

ಒಂದನೆ ಅಹಮ್ಮದಷಾನು ಗೊಂಡ್ವಾನ ಪ್ರದೇಶದ ಮೇಲೆ ಎರಡನೆ ದಾಳಿ ಕೈಗೊಂಡ. ಕಾರಣ ಅಲ್ಲಿಯ ಪ್ರದೇಶಗಳಾದ ಮಾಳ್ವಾ ಖಾಂದೇಶ ಹಾಗೂ ಖೇರಲ್‌ದ ದೊರೆಗಳು ಅವನಿಗೆ ಕಪ್ಪು ಕಾಣಿಕೆ ಕೊಡುವುದನ್ನು ನಿಲ್ಲಿಸಿದವು ಹಾಗೂ ಮಾಳ್ವಾದ ಸುಲ್ತಾನನಾದ ಹೂಸಾಂಗನ ನೇತೃತ್ವದಲ್ಲಿ ದಾಳಿ ಮಾಡಿದರು.

ಆದರೆ ಕೋನೆಯಲ್ಲಿ ಅಹಮ್ಮದಷಾ ಅವರನ್ನು ಹಿಮ್ಮಟಿಸಿದನು ಮತ್ತು ಶಾನು ಕಳೆದುಕೊಂಡ ಪ್ರದೇಶಗಳಾದ ಖೇರಲ ಮಾಳ್ವದಲ್ಲಿ ತನ್ನ ಹಿಡಿತ ಸಾಧಿಸಿದನು.

ಆದರೆ ಖಾಂದೇಶದ ನಾಸಿರ್‌ಖಾನ್ ಫರಾಕಿಯು ಗುಜುರಾತ ಪ್ರದೇಶದ ಮೇಲೆ ಪದೆ ಪದೆ ದಾಳಿಮಾಡಿ ಭಯಪಡಿಸುತ್ತಿದ್ದ. ಒಂದನೆ ಅಹಮ್ಮದಷಾನು ಖಾಂದೇಶ ಮೇಲೆ ತನ್ನ ಹಿಡಿತವನ್ನು ಸಾಧಿಸಲು ಅಜೀಜಖಾನನ ನೇತೃತ್ವದಲ್ಲಿ ಸೈನ್ಯ ಕಳುಹಿಸಿ ಕೊಟ್ಟ. ಬಹಮನಿ ಸೈನ್ಯ ಖಾಂದೇಶ ಪ್ರದೇಶವನ್ನು ವಶಪಡಿಸಿಕೊಂಡಿತು. "ನಾಸಿರ್‌ಖಾನ ಫರಾಕಿಯು ಒಂದನೆ ಅಹಮದ್‌ಷಾನೊಂದಿಗೆ ಒಪ್ಪಂದ ಮಾಡಿಕೊಂಡು ತನ್ನ ಮಗಳಾದ ಆಗಾಜೀನಾಬ್‌ಳನ್ನು ರಾಜಕುಮಾರನಾದ ಎರಡನೆ ಅಲ್ಲಾವುದ್ದೀನ ಅಹಮದಷಾಗೆ ಕೊಟ್ಟು ವಿವಾಹ ಮಾಡಿದನು"[೪೨] ಅದಲ್ಲದೆ ಅಪಾರ ಪ್ರಮಾಣದ ಸಂಪತ್ತು ಒಡವೆ ವಸ್ತ್ರಗಳು ನೀಡಿದನು.

**೨೦) ವಿಜಯನಗರದ ಮೇಲೆ ಆಕ್ರಮಣ ಕ್ರಿ ಶ ೧೪೩೬ :**

ಒಂದನೆ ಅಹಮದ್‌ಷಾನು ೧೪೩೬ ರಲ್ಲಿ ಮರಣ ಹೊಂದಿದ ನಂತರ ಅವನ ಮಗ ಎರಡನೆ ಅಲ್ಲಾವುದ್ದೀನ್ ಅಹಮ್ಮದ್ ಬಹಮನಿ ಸುಲ್ತಾನನಾದನು. ಇವನು ವಿಜಯನಗರದ ಎರಡೇ ದೇವರಾಯನ ವಿರುದ್ಧ ಬಲಾಢ್ಯ ಸೈನ್ಯದೊಂದಿಗೆ ತನ್ನ ಸಹೋದರ ಮಹಮ್ಮದ ಖಾನನನ್ನು ಕಳುಹಿಸಿದ.

ಇದಕ್ಕೆ ಕಾರಣ ರಾಯ ತನ್ನ ಐದು ವರ್ಷದ ಕಪ್ಪವನ್ನು ಕೊಡದೆ ತಡೆಹಿಡಿದಿದ್ದ ಮತ್ತು

ಬಾಕಿ ತೀರಿಸಲು ನಿರಾಕರಿಸಿದ. ಇದರಿಂದ ಬಹಮನಿಯ ಸೈನ್ಯ ವಿಜಯನಗರದ ಮೇಲೆ ಆಕ್ರಮಣ ಮಾಡತ್ತು.

ರಾಯನು ಅಲ್ಪ ಕಾಲದಲ್ಲಿಯೆ ಸೋತು ಒಪ್ಪಂದ ಮಾಡಿಕೊಂಡ. ಒಪ್ಪಂದಂತೆ ಇಪ್ಪತ್ತು ಆನೆಗಳು ಅಪಾರಸಂಪತ್ತು ಸಂಗೀತ ಮತ್ತು ನೃತ್ಯಗಳಲ್ಲಿ ಪಳಗಿದ ಇನ್ನೂರ ಸ್ತ್ರೀ ಗುಲಾಮರಲ್ಲದೆ ಮಹಮ್ಮದ ಖಾನನಿಗೆ ಒಂದು ಬೆಲೆಯುಳ್ಳ ಕಾಣಿಕೆ ನೀಡುವ ಮೂಲಕ ಶಾಂತಿ ಒಪ್ಪಂದ ಮಾಡಿಕೊಂಡ.

ಈ ವಿಜಯದಿಂದ ಉತ್ಸಾಹಿತನಾಗಿ ಮತ್ತು ದೊಡ್ಡ ಸೈನ್ಯದ ನೇತೃತ್ವ ಹೊಂದಿದ ರಾಜಕುಮಾರ ಮಹಮ್ಮದ ತನ್ನ ಸಹೋದರನ ವಿರುದ್ಧ ಬಂಡೆದ್ದ. ಅಧಿಕಾರದಲ್ಲಿ ಸಮಪಾಲಬೇಕೆಂಬುದೆ ಇವನ ಅತೃಪ್ತಿಗೆ ಕಾರಣವಾಗಿತ್ತು. ರಾಜಕುಮಾರ ಸುಲ್ತಾನನ ಮಂಡಲಾಧಿಪತಿಗಳಿಂದ ಮುದಗಲ್, ರಾಯಚೂರು, ಸೋಲಾಪುರ, ಬಿಜಾಪುರ ವಶಪಡಿಸಿಕೊಂಡ. ಆದರೆ ಸುಲ್ತಾನ ಸೈನ್ಯಗಳೊಂದಿಗೆ ಛಲ ಯುದ್ಧದಲ್ಲಿ ಪೂರ್ಣ ಸೋತು ಓಡಿಹೋದ. ನಂತರ ತಮ್ಮನು ಕ್ಷಮಕೇಳಿದ ಮೇಲೆ ಉದಾರಿ ದೊರೆ ಅವನ್ನು ಕ್ಷಮಿಸಿ ರಾಯಚೂರಿನ ಕೋಟೆ ಮತ್ತು ಅದರ ಸುತ್ತಲಿನ ಪ್ರದೇಶಗಳನ್ನು ಅವನಿಗೆ ನೀಡಲಾಯಿತು.

### ೨೧) ಕೊಂಕಣದ ಮೇಲೆ ದಾಳಿ ಕ್ರಿ ಶ ೧೪೩೭ :

ಎರಡನೆ ಅಲ್ಲಾವುದ್ದಿನ್ ಅಹಮ್ಮದಷಾನು ಕೊಂಕಣ ಪ್ರದೇಶದ ಮೇಲೆ ಅಧಿಕಾರ ಸ್ಥಾಪಿಸಲು ತನ್ನ ಮಂತ್ರಿಯಾದ ದಿಲಾವರ್‌ಖಾನನ ನೇತೃತ್ವದಲ್ಲಿ ಸೈನ್ಯ ಕೊಟ್ಟ ಕಳುಹಿಸಿದ. ಅಲ್ಲಿಯ ದೊರೆಯಾದ ಸಂಗಮೇಶ್ವರನ್ನು ಸ್ವಾತಂತ್ರ್ಯ ಘೋಷಿಸಿಕೊಂಡು ಆಳ್ವಿಕೆ ಮಾಡುತ್ತಿದ್ದನು.

"ದಿಲಾವರ್‌ಖಾನನು ಅಲ್ಲಿಯ ದೊರೆಯನ್ನು ಸೋಲಿಸಿ ತನ್ನ ಅಧೀನದಲ್ಲಿರಲು ಒತ್ತಾಯಿಸಿದನು. ಇದರ ಪರಿಣಾಮವಾಗಿ ಅಲ್ಲಿಯ ರಾಜ ಸಂಗಮೇಶ್ವರನು ತನ್ನ ಮಗಳನ್ನು ಸುಲ್ತಾನನಿಗೆ ಒಪ್ಪಿಸಿದನು. ಸುಲ್ತಾನ ಅವಳ ಸೌಂದರ್ಯಕ್ಕೆ ಬೇರಗಾಗಿ ಅವಳನ್ನು ವಿವಾಹವಾದನು. ಹಾಗೂ ಅವಳ ಹೆಸರು ಜಾಬಾಚೇಹರಾ ಎಂದಿಟ್ಟ"[೪೩]

### ೨೨) ಖಾಂದೇಶ ವಿರುದ್ಧ ಹೋರಾಟ ಕ್ರಿ ಶ ೧೪೩೮ :

ಕ್ರಿ. ಶ ೧೪೩೭ ರಲ್ಲಿ ಸುಲ್ತಾನ ಅಲಾವುದ್ದೀನ ಅಹಮ್ಮದನು ಖಾಂದೇಶದ ವಿರುದ್ಧ ಹೋರಾಟಬೇಕಾಯಿತು. ಖಾಂದೇಶದ ಸುಲ್ತಾನ ನಸಿರ್‌ಖಾನ ಫಾರೂಕೀಯ ಮಗಳನ್ನು ಸುಲ್ತಾನ ಮದುವೆಯಾಗಿದ್ದ. ಸುಲ್ತಾನನು ಆಗಾ ಜಬಿನಾಳನ್ನು ನಿರ್ಲಕ್ಷಿಸಿ ಹಿಂದೂ ರಾಣಿಗೆ ಹೆಚ್ಚಿನ ಮಹತ್ವ ನೀಡಿದನು.

ಇದರಿಂದ ಕೋಪಿತಳಾದ ಇವಳು ಈ ವಿಷಯವನ್ನು ತನ್ನ ತಂದೆಗೆ ತಿಳಿಸಿದಳು. ತನ್ನ ಅಳಿಯನ ವಿರುದ್ಧ ಕ್ರಮ ತೆಗೆದುಕೊಳ್ಳಲು ಮಾಳವ ಮತ್ತು ಗುಜುರಾತ ಸುಲ್ತಾನರೊಂದಿಗೆ ಒಕ್ಕೂಟವನ್ನು ಮಾಡಿಕೊಂಡು ಬಹುಮನಿಯರ ಮೇಲೆ ಆಕ್ರಮಣ ಮಾಡಿದರು.

"ಸುಲ್ತಾನನು ಆಫಾಕೀಯರ ಮುಖಂಡನಾದ ಖಲಿಫ ಹಸನ್‌ನ್ನುನು ಬಹಮನಿಯ ಸೈನ್ಯದ ಮುಖಂಡನಾಗಿ ನೇಮಿಸಿದ. ಇತನು ಖಾಂದೇಶದ ಸುಲ್ತಾನನ ಒಕ್ಕೂಟವನ್ನು ಎದುರಿಸಿದ. ಲಾಲಿಂಗ ಎಂಬ ಪ್ರದೇಶದಲ್ಲಿ ನೆಡದ ಕಾಳಗದಲ್ಲಿ ಒಕ್ಕೂಟ ಸೈನ್ಯ ಸೋತು ಹೋಯಿತು"[೪೪]

ಖಲಿಫ ಹಸನ್ ವಿಜಯನಾಗಿ ಬೀದರ್‌ಗೆ ಹಿಂದಿರುಗಿದ. ದಖನಿ ಮತ್ತು ಆಫಾಕೀಯ ವರ್ಗ ವೈಷಮ್ಯ ಖಲಿಫ್ ಹಸನ್ನನ ವಿಜಯದಿಂದ ಮತ್ತಷ್ಟು ಬಿಗಡಾಯಿಸಿತು. ಆಫಾಕೀಗಳು ಸಹಜವಾಗಿಯೇ ಮೇಲಿದ್ದರು ಇದರಿಂದಾಗಿ ದಖ್ಖನಿಯರಲ್ಲಿ ದ್ವೇಷ ದಟ್ಟವಾಯಿತು.

**೨೩) ವಿಜಯನಗರದ ಎರಡನೆ ದೇವರಾಯದೊಂದಿಗೆ ಹೋರಾಟ ಕ್ರಿ. ಶ ೧೪೪೩ :**

ಬಹಮನಿಯ ಸುಲ್ತಾನ ಅಲ್ಲಾವುದ್ದೀನ್ ಅಹಮ್ಮದಷಾನು ಏಳುಲಕ್ಷ ವರಹವುಳ್ಳ ಸಂದಾಯವನ್ನು ಬೇಡಿ ರಾಜನಿಗೆ ಸಂದೇಶ ಕಳಿಹಿಸಿದನು. ವಿಜಯನಗರದ ಎರಡನೆಯ ದೇವರಾಯನು ಸುಲ್ತಾನನ್ನು ದಿಟ್ಟ ಉತ್ತರ ಕಳುಹಿಸಿ ಯುದ್ಧ ಸಿದ್ಧತೆ ಮಾಡಿಕೊಂಡನು.

ಎರಡು ಪಕ್ಷಗಳು ಕಳಿಸಿದ ಸೈನ್ಯ ಪಡೆಗಳು ಎರಡು ರಾಜ್ಯಗಳ ಗಡಿಗಳಲ್ಲಿ ಬಹಳ ಧ್ವಂಸ ಮಾಡಿದವು. ವಿಜಯನಗರದ ಸೇನಾಪತಿಯು ಬಹಮನಿ ನಾಡಿನ ಮೇಲೆ ದಾಳಿ ಮಾಡಿ ಹಲವಾರು ನತದೃಷ್ಟ ಸೆರೆಯಾಳುಗಳನ್ನು ವಶಪಡಿಸಿಕೊಂಡ. ನಂತರ ದೇವಾರಾಯನ ಮಗ ತುಂಗಭದ್ರ ನದಿಯನ್ನು ದಾಟಿ ಮುದುಗಲ್ ಕೋಟೆ ವಶಪಡಿಸಿಕೊಂಡನು. ರಾಯಚೂರ ಮತ್ತು ಬಂಕಾಪುರ ಕೋಟೆಗಳನ್ನು ಮುತ್ತಿಗೆ ಹಾಕಿದ ಹಾಗೂ ಕೃಷ್ಣಾ ನದಿಯ ದಂಡೆಯ ಮೇಲೆ ಬಿಡಾರ ಹೂಡಿದನು. ಮತ್ತು ಸೈನಿಕ ತಂಡಗಳ್ನು ಕಳುಹಿಸಿ ಸಗರ ಮತ್ತು ಬಿಜಾಪುರಗಳಷ್ಟು ದೂರದ ನಾಡನ್ನು ಸುಲಿದು ಬೆಂಕಿ ಮತ್ತು ಕತ್ತಿಯಿಂದ ನಾಶಪಡಿಸಿದರು.

ಈ ದಾಳಿಯ ಸುದ್ದಿ ತಿಳಿದ ಸುಲ್ತಾನ ಎರಡನೆ ಅಲ್ಲಾವುದ್ದೀನ್ ಅದನ್ನು ಹಿಮ್ಮೆಟ್ಟಿಸಲು ಸಿದ್ದತೆ ಮಾಡಿಕೊಂಡ ಮತ್ತು ತೆಲಂಗಾಣ ದೌಲತಾಬಾದ ಮತ್ತು ಬಿರಾರ್‌ನ ತನ್ನ ಎಲ್ಲಾ ಪಡೆಗಳಿಗೆ ತಡಮಾಡದೆ ರಾಜಧಾನಿ ಅಹಮದಾಬಾದಿಗೆ ಬರುವಂತೆ ಆಜ್ಞಾಪಿಸಿದನು. ಅವುಗಳು ಬಂದ ಮೇಲೆ ಎಲ್ಲವನ್ನೂ ಪರಿಶೀಲಿಸಿದ. ತನ್ನ ಸೈನ್ಯದಲ್ಲಿ ಐವತ್ತುಸಾವಿರ ಅಶ್ವ ಅರವತ್ತು ಸಾವಿರ ಕಾಲಾಳು ಮತ್ತು ಫಿರಂಗಿಗಳ ಗಮನಾರ್ಹ ಸೈನ್ಯ ಇದ್ದದನ್ನು ಕಂಡುಕೊಂಡ. ಈ ಬಲದೊಂದಿಗೆ ಅವನು ವೈರಿಯ ವಿರುದ್ಧ ಸಾಗಿದನು. ದೇವರಾಯ ಸುಲ್ತಾನ ಬರುವದನ್ನು ನೋಡಿ ತನ್ನ ಠಾಣೆ ಬದಲಿಸಿದ. ಮುದುಗಲ್ ಕೋಟೆಯ ಗೋಡೆಗಳ ಕೆಳಗೆ ಬಿಡಾರ ಹೂಡಿ ನಂತರ ಸುಲ್ತಾನನಿಗೆ ತೊಂದರೆ ಕೊಡಲು ದೊಡ್ಡ ಸೈನ್ಯವನ್ನು ಕಳುಹಿಸಿದ.

"ಸುಲ್ತಾನ ಮುದುಗಲ್‌ನಿಂದ ಹನ್ನೆರಡು ಮೈಲುಗಳ ದೂರದಲ್ಲಿ ನಿಂತು ದೇವರಾಯನ ಮಕ್ಕಳ ವಿರುದ್ಧ ದೌಲತಾಬಾದಿನ ಸೈನಿಕರೊಂದಿಗೆ ಮಲಿಕ್‌ಅಲ್ ತಿಜಾರ್‌ನನ್ನು ಮತ್ತು ಬಿಜಾಪುರದ ಮಂಡಲಾಧಿಪತಿ ಖಾನ ಝುಮೌನ್ ಮತ್ತು ಬಿರಾರ್ ಹಾಗೂ ತೆಲಂಗಾಣದ ಸೈನ್ಯಗಳ

ದಂಡನಾಯಕರಾದ ಖಾನ ಅಝಿಮ್‌ರನ್ನು ಮುಖ್ಯ ಶತ್ರು ಪಡೆಯ ವಿರುದ್ಧ ಕಳುಹಿಸಿದ."[೪೫] ಮಲಿಕ್-ಅಲ್-ತಿಜಾರ್ ಮೊದಲು ರಾಯಚೂರಿಗೆ ಹೋಗಿ ದೇವರಾಯನ ಹಿರಿಯ ಮಗನೊಂದೊಗೆ ಯುದ್ಧ ಮಾಡಿದನು. ಅವನು ಯುದ್ಧದಲ್ಲಿ ಗಾಯಗೊಂಡು ಬಂಕಾಪುರ ಕಡೆಗೆ ಓಡಿದ. ಅಲ್ಲಿಂದ ಕೋಟೆಯ ಮುತ್ತಿಗೆ ಕೈಬಿಟ್ಟು ಬಂದ ಅವನ ತಮ್ಮ ಅವನೊಂದಿಗೆ ಕೂಡಿಕೊಂಡನು.

"ಎರಡು ತಿಂಗಳ ಅವಧಿಯಲ್ಲಿ ಎರಡು ಬೃಹತ್ ಸೈನ್ಯಗಳ ಮಧ್ಯ ಮುದಗಲ್ಲಿನ ಹತ್ತಿರ ಮೂರ ಕಾಳಗಗಳಾದವು. ಮೊದಲನೆಯದರಲ್ಲಿ ಎರಡು ಕಡೆಯಿಂದ ಅನೇಕರು ಮಡಿದರು. ಮತ್ತು ವಿಜಯನಗರ ಸೈನ್ಯಕ್ಕೆ ಪ್ರಯೋಜನೆ ಉಂಟಾಗಿ ಬಹಮನಿಯರು ತೀವ್ರ ತೊಂದರೆ ಅನುಭವಿಸಿದರು. ಸುಲ್ತಾನ ಮಿಕ್ಕವುಗಳಲ್ಲಿ ಯಶಸ್ವಿಯಾದ ಮತ್ತು ಕೊನೆಯದರಲ್ಲಿ ದೇವರಾಯನ ಹಿರಿಯ ಮಗ ಖಾನ ಝುಮ್ಮೌನ ಎಸೆದ ಭರ್ಚಿಯಿಂದ ಮೃತಪಟ್ಟನು"[೪೬] ಈ ಘಟನೆ ವಿಜಯನಗರ ಸೈನಿಕರಲ್ಲಿ ಭೀತಿ ಉಂಟುಮಾಡಿತು. ಮತ್ತು ಅವರು ಅತ್ಯಂತ ಅವಸರದಿಂದ ಮುದಗಲ್ ಕೋಟೆಯೊಳಗೆ ಓಡಿದರು ಇಬ್ಬರು ಮುಖ್ಯ ಮಹಮ್ಮದಿಯ ಅಧಿಕಾರಿಗಳು ಬೆನ್ನಟ್ಟುವ ಹುಮ್ಮಸ್ಸಿನಲ್ಲಿ ಓಡಿ ಹೋಗುವವರೊಂದಿಗೆ ನಗರವನ್ನು ಪ್ರವೇಶಿಸಿದರು. ಆದರೆ ಅವರನ್ನು ವಿಜಯನಗರ ಸೈನ್ಯ ಸೆರೆ ಹಿಡಿಯಿತು.

ಸುಲ್ತಾನ ತನ್ನ ಪ್ರದೇಶಗಳಲ್ಲಿ ಇನ್ನೊಮ್ಮೆ ತೊಂದರೆ ಕೊಡುವುದಿಲ್ಲವೆಂದು ವಚನವಿತ್ತರೆ ತಾನು ನಿಗದಿಪಡಿಸಿದ ಕಪ್ಪವನ್ನು ಪ್ರತಿ ವರ್ಷ ಕೊಡುವುದಾಗಿ ಮತ್ತು ಇಬ್ಬರೂ ಸೆರೆಯಾಳುಗಳನ್ನು ಮರಳಿಸುವುದಾಗಿ ದೇವರಾಯ ಸುಲ್ತಾನನಿಗೆ ಸಂದೇಶ ಕಳಿಸಿದನ್ನು. ಸುಲ್ತಾನ ಇದನ್ನು ಸ್ವೀಕರಿಸಿ ಒಪ್ಪಂದ ಮಾಡಿಕೊಳ್ಳಲಾಯಿತು. ಸುಲ್ತಾನನು ಅಪಾರ ಕಪ್ಪು ಕಾಣಿಕೆ ಹಾಗೂ ತನ್ನ ಸೆರೆಯಾಳು ಅಧಿಕಾರಿಗಳೊಂದಿಗೆ ವಾಪಸ್ಸಾದನು. ಹೀಗೆ ಎರಡೂ ಪಕ್ಷಗಳು ತಮ್ಮ ಒಪ್ಪಂದವನ್ನು ಪಾಲಿಸಿದವು.

**೨೪) ಕೊಂಕಣದ ಸಂಗಮೇಶ್ವರದ ಮೇಲೆ ದಾಳಿ ಕ್ರಿ ಶ ೧೪೪೬–೪೭ :**

ಕೊಂಕಣದ ಸಂಗಮೇಶ್ವರದ ರಾಜನಾದ ಉದ್ದಂಡನು ಬಹಮನಿ ಸುಲ್ತಾನನಿಗೆ ಅಧೀನನಾಗಿದ್ದರೂ ಅವನ ಪಶ್ಚಿಮ ಭಾಗಗವನ್ನು ಆಕ್ರಮಿಸಿದ.

ಇದನ್ನು ತಡೆಯಲು ಸುಲ್ತಾನ ಎರಡನೇ ಅಲ್ಲಾವುದ್ದೀನ ಖಲಿಫ ಹಸನನನ್ನು ಸೈನ್ಯದೊಂದಿಗೆ ಕಳುಹಿಸಿದ. ಇವನ ಸೈನ್ಯವು ದಖ್ಖನಿ ಮತ್ತು ಆಫಾಕೀಯಗಳನ್ನು ಒಳಗೊಂಡ ಮಿಶ್ರ ವರ್ಗವಾಗಿತ್ತು. ಇವನು ಮರಾಠ ಪ್ರದೇಶಕ್ಕೆ ನುಗ್ಗಿ ಪೂನಾದ ಉತ್ತರ ಭಾಗ ಚಾಕನ ಪ್ರದೇಶ ಆಕ್ರಮಿಸಿದ. ಈ ಮಧ್ಯ ಕೊಂಕಣದ ಹೆಗ್ಗಾಡಿನಲ್ಲಿ ಸಿಕ್ಕಿಕೊಂಡ ಬಹಮನಿಯ ಸೇನೆ ಸಂಕಷ್ಟವನ್ನು ಅನುಭವಿಸಬೇಕಾಯಿತು. ಖಲಿಫ್ ಹಸನ್ ತೀವ್ರ ಆಮಶಂಕೆ ರೋಗಕ್ಕೆ ಗುರಿಯಾಗಿ ಮೃತನಾಗಿರಬೇಕು. ಇಲ್ಲವೇ ಕೊಲೆಗೀಡಾಗಿರಬೇಕು. ಸೈನ್ಯ ಬಹಳಷ್ಟು ನಾಶವಾಯಿತು. ದಖ್ಖನಿಯರು ಖಲಿಫನಿಗೆ ಸಹಕರಿಸಲಿಲ್ಲ. ಆದರೆ ಇಷ್ಟೆಲ್ಲ ಸೋಲಿಗೆ ಆಫಾಕೀಯರೆ ಕಾರಣರೆಂದು ಅವರು ಸುಲ್ತಾನನಿಗೆ ವರದಿ ಮಾಡಿದರು. ಕೋಪಗೊಂಡ ಸುಲ್ತಾನನು ಚಾಕನ್‌ದಲ್ಲಿರುವ ಆಫಾಕೀಯರನ್ನು ಕೊಲ್ಲಿಸಿದ. ನಂತರ ಸತ್ಯ ಬಹಿರಂಗವಾದ

ಮೇಲೆ ಸುಲ್ತಾನನು ಮರಗಿ ಆಫಾಕೀ ನಾಯಕರನ್ನು ಉನ್ನತ ಅಧಿಕಾರಕ್ಕೆ ನೇಮಿಸಿದ. ಇದರಿಂದ ಮತ್ತೊಮ್ಮೆ ಆಫಾಕೀಗಳು ಪ್ರಬಲರಾದರು.

**೨೫) ಆಂತರಿಕ ದಂಗೆಗಳು ಕ್ರಿ.ಶ ೧೪೫೫ :**

ಸುಲ್ತಾನ ಅಲ್ಲಾವುದ್ದೀನ್ ಅಹಮ್ಮದಷಾನ ಕೊನೆಯ ದಿನಗಳಲ್ಲಿ ತೆಲಂಗಾಣ ಮತ್ತು ಮಾಳವಗಳಲ್ಲಿ ದಂಗೆಗಳಾದವು. ತೆಲಂಗಾಣದಲ್ಲಿ ಅಲ್ಲಾವುದ್ದೀನ್‌ನ ಭಾವನಾದ ಜಾಲಾಲ್‌ಖಾನನು ದಂಗೆಯೆದ್ದನು. ಅವನ ಜೊತೆ ಆತನ ಮಗ ಸಿಕಂದರ ಸಹ ಸೇರಿಕೊಂಡಿನು.

ಮಾಳವಾದಲ್ಲಿ ಒಂದನೆ ಮಹಮೂದನು ದಂಗೆಯೆದ್ದನು. ಸುಲ್ತಾನ ಅಲ್ಲಾವುದ್ದೀನ ಅಹಮದಷಾನು ತನ್ನ ಸಾಮರ್ಥ ದಂಡನಾಯಕನಾದ ಮಹಮ್ಮದ ಗವಾನನ ನೇತೃತ್ವದಲ್ಲಿ ಸೈನ್ಯ ಕೊಟ್ಟು ಕಳುಹಿಸಿದ ಹಾಗೂ ತೆಲಂಗಾಣದ ಜಲಾಲಖಾನ ಮತ್ತು ಆತನ ಮಗ ಸಿಕಂದರನನ್ನು ಸೋಲಿಸಿ ತೆಲಂಗಾಣ ಪ್ರದೇಶ ವಶಪಡಿಸಿಕೊಂಡು ಶಾಂತಿಯುತವಾಗಿ ಯುದ್ಧ ಮುಗಿಸಿದನು.

ಸುಲ್ತಾನ ಅಲ್ಲಾವುದ್ದೀನ ಅಹಮ್ಮದಷಾನ ಚರ್ಮದ ಮೇಲೆ ಗಂಟುಗಳಿದ್ದು ೧೪೫೮ರಲ್ಲಿ ಮೃತನಾದನು.

**೨೬) ಪ್ರಜಾಪೀಡಕ (ಜಾಲೀಮ್)ನ ಆಳ್ವಿಕೆ :**

ಅಲ್ಲಾವುದ್ದೀನ ಅಹಮದಷಾ ಮರಣದ ನಂತರ ಕ್ರಿ.ಶ ೧೪೫೮ರಲ್ಲಿ ಆತನ ಹಿರಿಯ ಮಗ ಅಲ್ಲಾವುದ್ದೀನ್ ಹುಮಾಯುನ್‌ಷಾ ಅಧಿಕಾರಕ್ಕೆ ಬಂದನು. ಇವನು ತನ್ನ ಸಹೋದರ ಹಸನ ಖಾನನನ್ನು ಮೂಲೆಗುಂಪು ಮಾಡಿ ತಾನೇ ಸಿಂಹಾಸನಾರೂಡನಾದನು. "ಈತನ ಆಳ್ವಿಕೆಯ ಮೂರು ವರ್ಷಗಳು ರಾಜ್ಯದಲ್ಲಿ ಅತ್ಯಂತ ಗೊಂದಲ ಆತಂಕದ ಪರಿಸ್ಥಿತಿಯನ್ನು ನಿರ್ಮಿಸಿದ್ದವು. ಹೇಗೆಂದರೆ ಸುಲ್ತಾನ ತನ್ನ ವಿರುದ್ಧ ದಂಗೆ ಎದ್ದವರನ್ನು ಕೊಲ್ಲಿಸಿದನು. ಆತನ ಸೋದರನಾದ ಹಸನ್ ಖಾನನು ಸೆರೆಮನೆಯಿಂದ ತಪ್ಪಿಸಿಕೊಂಡ ಕಾರಣಕ್ಕಾಗಿ ಆತನನು ಹಸಿದ ಹುಲಿಯ ಬಾಯಿಗೆ ಆಹಾರವಾಗಿ ಕೊಡಲಾಯಿತು. ಅವನ ಬೆಂಬಲಿಗರನ್ನು ಕುದಿಯುವ ನೀರಿನಲ್ಲಿ ಅಥವಾ ಎಣ್ಣೆಯೊಳಕ್ಕೆ ಎಸೆಯಲಾಯಿತು. ಶೀಘ್ರ ಕೋಪಿ ಹಾಗೂ ಕ್ರೂರಿಯಾಗಿದ್ದ ಹುಮಾಯುನ್‌ಷಾ ಪ್ರಜೆಗಳನ್ನು ಬಹಳ ಹಿಂಸಿಸ ತೊಡಗಿದ. ಇದರಿಂದ ರಾಜ್ಯದಲ್ಲಿ ದಂಗೆಗಳುಂಟಾದವು ಅರಮನೆಯಲ್ಲೂ ಕಲಹ ತೀವ್ರಗೊಂಡು ಹುಮಾಯನ್‌ಷಾ ಕೊಲೆಗೀಡಾದನು"[೪೭] ಹಲವರ ಅಭಿಪ್ರಾಯ ಪ್ರಕಾರ ಇವನೊಬ್ಬ ಪ್ರಜಾಪಿಡಕ ಜಲೀಮ್ ದೊರೆಯಾಗಿದ್ದ.

ಇವನ ನಂತರ ಇವನ ಮಂತ್ರಿಯಾದ ಪ್ರಖ್ಯಾತ ಮಹಮದ್ ಗವಾನ್ ಮತ್ತು ಸುಲ್ತಾನ ಪತ್ನಿ ನರ್ಗಿಸ್ ಬೇಗಂ ಇವರು ಪ್ರತಿನಿಧಿಗಳಾಗಿ ಆಳ್ವಿಕೆ ಮಾಡಿದರು ಹಾಗೂ ಹುಮಾಯನನ ಎಂಟು ವರ್ಷದ ಮಗನಾದ ನಿಜಾಮುದ್ದೀನ್ ಅಹಮದಷಾ ಸಿಂಹಾಸನ ರೂಡನಾದನು.

**೨೭) ತೆಲಂಗಾಣ ಮೇಲೆ ದಂಡಯಾತ್ರೆ ಕ್ರಿ ಶ ೧೪೬೦ :**

ಹುಮಾಯನ ಆಳ್ವಿಕೆ ಕಾಲದಲ್ಲಿ ತೆಲಂಗಾಣ ಮೇಲೆ ಯುದ್ಧ ಕೈಗೊಳಬೇಕಾಯಿತು "ಇದಕ್ಕೆ ಕಾರಣ ಹುಮಾಯನ ಆಡಳಿತದಲ್ಲಿ ಸ್ಥಳಿಯ ದಖ್ಖನಿಯರನ್ನು ನಿರ್ಲಕ್ಷಿಸಿ ವಿದೇಶಿಯರಾದ ಆಫಾಕೀಗಳನ್ನು ಉನ್ನತ ಸ್ಥಾನವನ್ನು  ನೀಡಿರುವುದಾಗಿದೆ.

ಮಹಮದ ಗವಾನನನ್ನು ರಾಜ್ಯದ ಪ್ರಧಾನಿಯಾಗಿ (ಮಲ್ಲಿಕನಾಯಬ) ಬಿಜಾಪುರದ ಪ್ರಾಂತಾಧಿಕಾರಿಯಾಗಿ ಮಲ್ಲಿಕ್‌ಷಾನನ್ನು, ತೆಲಂಗಾಣದಲ್ಲಿ ಖ್ವಾಜಾಜಾನನ್ನು ನೇಮಕ ಮಾಡಿದನು. ಸ್ಥಳೀಯ ಅಧಿಕಾರಿಗಳಾದ ಜಲಾಲ ಖಾನ ಮತ್ತು ಸಿಂಕದರನನ್ನು ಕಡೆಗಣಿಸಿ ಬಾಲಕೊಂಡ ಜಾಗೀರ ನೀಡಿದನ್ನು."[೪೮] ಆದರೆ ಇದನ್ನು ತಿರಸ್ಕರಿಸಿ ಅವಮಾನಿತರಾಗಿ ಜಲಾಲಖಾನ ಮತ್ತು ಸಿಕ್ಕಂದರ ದಂಗೆಯದ್ದರು. ಇದರಿಂದ ಹುಮಾಯನ ತೆಲಂಗಾಣ ಪ್ರದೇಶಕ್ಕೆ ಸೈನ್ಯ ರವಾನಿಸಿದ ಬಹುಮಿನಿ ಸೈನ್ಯ ಅಲ್ಲಿಯ ದಂಗೆಯನ್ನು ಹತ್ತಿಕ್ಕಿತ್ತು. ಸಿಕಂದರ್‌ಖಾನ ಯುದ್ಧದಲ್ಲಿ ಕೊಲೆಯಾದರೆ ಜಲಾಲ ಖಾನ ಶರಣದನು.

**೨೮) ದೇವರಕೊಂಡದ ಮೇಲೆ ದಾಳಿ ಕ್ರಿ ಶ ೧೪೬೦ :**

"ದೇವರಕೊಂಡದ ರಾಜನಾದ ಲಿಂಗಾರೆಡ್ಡಿಯು ತೆಲಂಗಾಣದ ಸಿಕಂದರಗೆ ಯುದ್ಧದಲ್ಲಿ ಹುಮಾಯನ ವಿರುದ್ದು ಸಹಾಯ ಮಾಡಿದ. ಇದು ಹುಮಾಯನನ ದಾಳಿಗೆ ಕಾರಣವಾಯಿತು.

ಹುಮಾಯನ್ ಅವನನ್ನು ಶಿಕ್ಷಿಸಲು ತೆಲುಗರ ನಾಡಿನ ಮೇಲೆ ಯುದ್ಧ ಹೂಡಿದನು"[೪೯] ದೇವರಕೊಂಡಕ್ಕೆ ಮುತ್ತಿಗೆ ಹಾಕಿದ. ರೆಡ್ಡಿಗಳ ರಾಜನಾದ ಲಿಂಗಾರೆಡ್ಡಿ ಓರಿಸ್ಸಾದ ರಾಜನಾದ ಕಪಿಲೇಶ್ವರ ಸಹಾಯದೊಂದಿಗೆ ಬೃಹತ ಪ್ರಮಾಣದ ಗಜದಳ ಹಾಗು ಕಾಲ್ದಳವನ್ನು ರವಾನಿಸಿದನು. 'ಹಿಂದು ಸೈನ್ಯ ಎಷ್ಟೊಂದು ಪ್ರತಿರೋಧ ಒಡ್ಡಿತಂದರೆ ದಖ್ಖನಿಯ ಸೈನ್ಯಗಳು ದಿಗ್ಭ್ರಮೆಗೊಂಡು ಹಿಂತಿರುಗಿದವು.

**೨೯) ಓರಿಸ್ಸಾದ ಕಪಿಲೇಂದ್ರನ ದಾಳಿ ಕ್ರಿ. ಶ ೧೪೬೧ :**

ಹುಮಾಯೂನಷಾನ ಮರಣದ ನಂತರ ಅವನ ಮಗ ಎಂಟು ವರ್ಷದ ಬಾಲಕ ನಿಜಾಮುದ್ದೀನ್ ಅಹಮದಷಾನು ಆಳ್ವಿಕೆಗೆ ಬಂದನು. ಬಾಲಕ ಸುಲ್ತಾನನ ಆಳ್ವಿಕೆಯ ದುರ್ಲಾಭ ಪಡೆಯಲು ಒರಿಸ್ಸಾದ ಅರಸ ಕಪಿಲೇಂದ್ರನು ತೆಲಂಗಾಣದ ನೆರವಿನಿಂದ ಬಹುಮನಿಯ ಮೇಲೆ ದಂಡತ್ತಿ ಬಂದನು.

ಅವನ ಸೇನೆ ಬೀದರ್‌ನವರೆಗೂ ಧಾವಿಸಿತು. ಮಹಮದ್ ಗವಾನ ಮತ್ತು ಖ್ವಾಜ-ಇ-ಜಹಾನರ ಸಮರ್ಥ ನಾಯಕತ್ವದಲ್ಲಿ ಬಹಮನಿ ಸೇನೆ ಕಪಿಲೇಂದ್ರನನ್ನು ಸೋಲಿಸಿ ಓಡಿಸಿತು.

### ೩೦) ಮಾಳವ ಸುಲ್ತಾನ ದಾಳಿ ಕ್ರಿ ಶ ೧೪೬೨ :

"ಬಹಮನಿಯಲ್ಲಿ ಅಪ್ರಾಪ್ತ ವಯಸ್ಸಿನ ಸುಲ್ತಾನ ನಿಜಾಮುದ್ದೀನ್ ಇರುವುದನ್ನು ತಿಳಿದು ಮಾಳವಾದ ಸುಲ್ತಾನ ಮಹಮದ ಖಿಲ್ಜಿ ಬೀದರ ಮೇಲೆ ಯುದ್ಧಸಾರಿದನು.

ಇವನ್ನೊಂದಿಗೆ ಫಿರೋಜಬಾದದ ಸುಲ್ತಾನ ನಾಜಿಮ್‌ಷಾನು ಕೈಜೋಡಿಸಿದ ಕಾರಣ ಬಹಮನಿಯ ಉತ್ತರದ ಪ್ರದೇಶವೆಲ್ಲವೂ ಅವರ ವಶವಾಯಿತು."[೫೦]

ಕೆಲಕಾಲ ಬೀದರ ಸಹ ಅವರ ವಶದಲ್ಲಿತ್ತು. ಇಂತಹ ವಿಷಮ ಪರಿಸ್ಥಿತಿಯಲ್ಲಿ ಗವಾನನು ಅನ್ಯಮಾರ್ಗವಿಲ್ಲದೆ ಗುಜುರಾತಿನ ಸುಲ್ತಾನ ಮಹಮದ್‌ಬೇಗನ ನೇರವನ್ನು ಯಾಚಿಸಿದ. ಗುಜುರಾತ ಮತ್ತು ಬಹಮನಿಯ ಸೈನ್ಯಗಳು ಜೊತೆಗೂಡಿ ಮಾಳವದ ಸೇನೆಯನ್ನು ಸೋಲಿಸಿತು. ಮತ್ತೊಮ್ಮೆ ೧೪೬೩ ರಲ್ಲಿ ಮಹಮದ ಖಿಲ್ಜೀ ಬಹಮನಿಯ ಮೇಲೆ ಯುದ್ಧವನು ಸಾರಿದರೂ ಜಯವನ್ನು ಸಂಪಾದಿಸದೆ ಹಿಂದಿರುಗ ಬೇಕಾಯಿತು.

### ೩೧) ಗೋವಾದ ಮೇಲೆ ಆಕ್ರಮಣ ಕ್ರಿ. ಶ ೧೪೭೯ :

ಬಹಮನಿಯಲ್ಲಿ ನಿಜಾಮಷಾನ ಮರಣದ ನಂತರ ಮೂರನೇ ಮಹಮದನು ಆಳ್ವಿಕೆಗೆ ಬಂದನು. ಇವನ ಕಾಲದಲ್ಲಿ ಮಹಮದ ಗವಾನ ಪ್ರಧಾನಿಯಾಗಿ ನೇಮಕವಾದನು. ಇವನು ವಿಜಯನಗರದ ಮೇಲೆ ದಂಡೆತ್ತಿ ಹೋದಾಗ ಅಲ್ಲಿ ವಿರೂಪಾಕ್ಷ ಅರಸನಾಗದ್ದನು.

ಇವನು ರಾಜ್ಯದ ಪಶ್ಚಿಮಕ್ಕೆ ದಂಡಯಾತ್ರೆ ಕೈಗೊಂಡು ನಂತರ ನೆಲ ಮತ್ತು ಜಲಮಾರ್ಗವಾಗಿ ವಿಜಯನಗರದ ಸ್ವಾಧೀನದಲ್ಲಿದ ಗೋವಾ ಮೇಲೆ ಆಕ್ರಮಣಮಾಡಿದನು. ಅವನು ಸಂಪೂರ್ಣ ವಿಜಯಿಯಾಗಿ ಅದನ್ನು ವಶಪಡಿಸಿಕೊಂಡನು. ಕರಾವಳಿಯ ವ್ಯಾಪಾರ ಸಂಪೂರ್ಣವಾಗಿ ಮಹಮ್ಮದೀಯರ ಕೈ ಸೇರಿತು. ಈ ಪ್ರದೇಶವು ಕುದುರೆ ವ್ಯಾಪಾರದ ಸಲುವಾಗಿ ಪ್ರಾಮುಖ್ಯತೆ ಪಡೆದಿತ್ತು. ವಿರುಪಾಕ್ಷನ ಕಾಲದಲ್ಲಿ ವಿಜಯನಗರವು ಗೋವಾ ಚಾಲ್ ಮತ್ತು ದಾಬುಲ್‌ಗಳನ್ನು ಕಳೆದುಕೊಂಡಿತು.

### ೩೨) ದಕ್ಷಿಣ ಕೊಂಕಣದ ಮೇಲೆ ದಾಳಿ ಕ್ರಿ ಶ ೧೪೭೦-೭೧ :

ದಕ್ಷಿಣ ಕೊಂಕಣದಲ್ಲಿ ರಾಜ ಸಂಗಮೇಶ್ವರನ್ನು ಆಳ್ವಿಕೆ ಮಾಡುತ್ತಿದ್ದನು ಇವನು ಕೊಂಕಣದ ಉತ್ತರ ಭಾಗವನ್ನು ಆಕ್ರಮಿಸಿದನು.

"ಗವಾನನು ಕೊಂಕಣದ ದಕ್ಷಿಣ ಪ್ರಾಂತಕ್ಕೆ ಸೈನ್ಯವನು ವರ್ಗಾಯಿಸಿ ಅಲ್ಲಿಯ ಖೇಲ್ನಾ ಕೋಟೆಯನ್ನು ವಶವಡಿಸಿಕೊಂಡ."[೫೧] ಈ ರೀತಿಯಾಗಿ ಬಹಮನಿಯ ಸಾಮ್ರಾಜ್ಯವು ಸಂಪೂರ್ಣವಾಗಿ ಕೊಂಕಣ ಪ್ರದೇಶ ವಶಪಡಿಸಿಕೊಂಡಿತು.

### ೩೩) ಉತ್ತರ ಕರ್ನಾಟಕ ಪ್ರದೇಶಗಳ ಮೇಲೆ ದಾಳಿ ಕ್ರಿ ಶ ೧೪೭೨-೭೩ :

ವಿಜಯನಗರದ ರಾಜ ವಿರುಪಾಕ್ಷನು ತಾನು ಕಳೆದುಕೊಂಡ ಪ್ರದೇಶವನ್ನು ಮತ್ತು ಪಡೆಯಲು ಬೆಳಗಾವಿ ರಾಜನ ಬೆಂಬಲದಿಂದ ಗೋವಾದ ಮೇಲೆ ದಂಡೆತ್ತಿ ಹೋದನು. ಈ ದಾಳಿಯ ಸುದ್ದಿ ತಿಳಿಯುತ್ತಲೆ ಮಹಮ್ಮದ ಶಾಹನ ಸೈನ್ಯವು ಬೆಳಗಾಂವ ಪ್ರದೇಶಕ್ಕೆ ನಡೆಯಿತು.

ಬೆಳಗಾಂವ ಅದು ಬಹಳ ಬಲವಾದ ಕೋಟೆ ಕೊತ್ತಲಗಳಿಂದ ಸಂರಕ್ಷಿತವಾದ ಕಣಿವೆ ಮಾರ್ಗವಾಗಿದ್ದು. ಅದಕ್ಕಿರುವ ಒಂದೇ ಪ್ರವೇಶ ಮಾರ್ಗ ಬೆಳಗಾಂವನ ರಾಜನನ್ನು ಸೋಲಿಸಿ ಹುಬ್ಬಳಿ ಬೆಳಗಾಂ ಮತ್ತು ಬಾಗಲಕೋಟೆ ಪ್ರದೇಶಗಳನ್ನು ಬಹುಮನೀಯ ರಾಜ್ಯದ ಅಧಿಪತ್ಯಕ್ಕೆ ಒಳಪಟ್ಟವು.

### ೩೪) ತೆಲಂಗಾಣ ಪ್ರದೇಶ ಮೇಲೆ ದಾಳಿ ಕ್ರಿ ಶ ೧೪೭೮ :

೧೪೭೫ ರ ಸುಮಾರಿಗೆ ದಖ್ಖನ್‌ದಲ್ಲಿ ಹಾಗೂ ತೆಲುಗು ನಾಡಿನಲ್ಲಿ ಎರಡು ವರ್ಷ ದೀರ್ಘ ಕಾಲದ ಭೀಕರ ಬರ ಬಿದ್ದಿತ್ತು. ಕೊನೆಗೆ ಕೊಂಡಪಲ್ಲೆಯ ಹಿಂದೂ ಜನ ಬಂಡೆದ್ದು ಮಹಮ್ಮದೀಯ ಮಂಡಲಾಧಿಪತಿಯನ್ನು ಕೊಲೆಗೈದು ಓರಿಸ್ಸಾದ ರಾಜನ ಸಹಾಯ ಕೇಳಿದರು.

ಓರಿಸ್ಸಾದ ರಾಜ ಕಂಪಿಲೇಶ್ವರನು ಸೈಜಾಮ್-ಉಲ್-ಮುಲ್ಕ್‌ನ ಅಧಿನದಲ್ಲಿದ ರಾಜಮುಂಡ್ರಿಗೆ ಮುತ್ತಿಗೆ ಹಾಕಿದ. ಆದರೆ ಆ ಊರಿನ ಬಿಡುಗಡೆಗೆ ಸ್ವತ: ಸುಲ್ತಾನ ಮೂರನೆ ಮಹಮ್ಮದಷಾನು ದಂಡೆತ್ತಿ ಬಂದಾಗ ಓರಿಸ್ಸಾದ ಸೈನ್ಯ ಹಿಂತಿರುಗಿತು. ೧೪೭೮ ಸಂದರ್ಭದಲ್ಲಿ ಮಹಮ್ಮದ್ ಓರಿಸ್ಸಾದ ರಾಜಧಾನಿಯೊಳಕ್ಕೆ ಸೈನ್ಯ ನುಗ್ಗಿಸಿದ. ಮತ್ತು ಅಲ್ಲಿಯ ನಿವಾಸಿಗಳನ್ನು ಹತ್ಯೆಗೈದು ವೈರಿಯ ನಾಡನ್ನು ನಾಶಪಡಿಸಿದನು. ರಾಜ ಶರಣಾಗತನಾದ ಮತ್ತು ಸುಲ್ತಾನನಿಂದ ಮುಕ್ತನಾಗಲು ಕೆಲವು ಬೆಲೆಯುಳ್ಳ ಆನೆಗಳನ್ನು ಕಾಣಿಕೆ ನೀಡಿದನು.

"ಓರಿಸ್ಸಾದ ದಾಳಿಯ ನಂತರ ಮಹಮ್ಮದಷಾ ಕೊಂಡಪಲ್ಲೆಯನ್ನು ವಶದಲ್ಲಿಟ್ಟುಕೊಂಡು ಅಲ್ಲಿಯ ದೇವಾಲಯಗಳನ್ನು ನಾಶಪಡಿಸಿದ ಅದಕ್ಕೆ ಸೇರಿದ ಬ್ರಾಹ್ಮಣ ಅರ್ಚಕರನ್ನು ಕೊಂದನು. ಆ ಜಾಗದ ಮೇಲೆ ಮಸೀದಿ ಕಟ್ಟಲು ಆಜ್ಞಾಪಿಸಿದ. ರಾಜಮುಂಡ್ರಿಯನ್ನು ವಶಪಡಿಸಿಕೊಂಡು ತೆಲಂಗಾಣ ನಾಡನ್ನು ಭದ್ರಪಡಿಸಿದನು".[೫೨]

### ೩೫) ಕಂಚಿ ಮೇಲೆ ದಾಳಿ ಕ್ರಿ ಶ ೧೪೮೧ :

ವಿಜಯನಗರದ ಸಂಬಂಧಿಯಾದ ನರಸಿಂಹರಾಯನು ಕರ್ನಾಟಕ ಮತ್ತು ತೆಲಂಗಾಣದ ಮಧ್ಯ ಇರುವ ಸಮುದ್ರದ ಕರಾವಳಿ ಹಾಗೂ ಮಚಲಿಪಟ್ಟಣಂ ಮೇಲೆ ಸ್ವಾತಂತ್ರನಾಗಲು ಪ್ರಯತ್ನಿಸುತ್ತಿದ್ದ. ಸುಲ್ತಾನ ಸೈನ್ಯ ಕೊಂಡಪಲ್ಲೆ ಗೆ ನಡೆದು ಅಲ್ಲಿಂದ ಮುಂದೆ ದಕ್ಷಿಣಕ್ಕೆ ತಿರುಗಿದ.

ಅಲ್ಲಿ "ಬೆಲೆಯುಳ್ಳ ಹರಳುಗಳಿಂದ ಅಲಂಕೃತವಾದ ಬಂಗಾರದ ತಗಡಗಳಿಂದ ಕೂಡಿದ

ಗೋಡೆಗಳು ಮತ್ತು ಚಾವಣಿಯುಳ್ಳ ಕಂಚಿಯ ದೇವಾಲಯವಿದೆ. ಎಂಬ ಸುದ್ದಿ ತಿಳಿದ ಮಹಮದನು ೬೦೦೦ ಅಶ್ವದಳ ಮಾತ್ರ ತನ್ನೊಂದಿಗೆ ತೆಗೆದುಕೊಂಡು ಪ್ರಯಾಣ ಬೆಳೆಸಿದ. ಕಂಚಿ ಮತ್ತು ರಾಮೇಶ್ವರದವರೆಗೆ ದಿಗ್ವಿಜಯ ಕೈಗೊಂಡು ಆ ಸ್ಥಳಗಳನ್ನು ಲೂಟಿಮಾಡಿ ಅಲ್ಲಿಯ ದೇವಾಲಯಗಳನ್ನು ನಾಶ ಮಾಡಿದನು. ನಂತರ ಸಾಳ್ವ ನರಸಿಂಹರಾಯನನ್ನು ಸೋಲಿಸಿ ಮಚಲೀಪಟ್ನಂ ಮತ್ತು ಕಂದಕೂರುಗಳನ್ನು ಗೆದ್ದನು.

**೩೬) ಮಹಮ್ಮದ ಗವಾನನ ಮರಣ ಮತ್ತು ಸಾಮ್ರಾಜ್ಯದ ವಿಘಟನೆ :**

ಗವಾನನ ಸಾಧನೆ ಮತ್ತು ಸುಧಾರಣೆಗಳು ಆಸ್ಥಾನಿಕರ ಕಣ್ಣುಕುಕ್ಕಿತು. ಅವನೊಬ್ಬ ಪರದೇಶಿ ಎಂದು ದೇಶಿಯ ದಖನ್ನರು ದೂರಿದರು ಅವನ ಅಂತ್ಯಕ್ಕೆ ಸಂಚು ಹೂಡಿದರು. ಆಸ್ಥಾನಿಕ ಮಲ್ಲಿಕ್ ಹಸನ್‌ನು ಖಾಲಿ ಕಾಗದದ ಮೇಲೆ ಗವಾನನ ಖಾಸಗಿ ಮುದ್ರೆಯನ್ನು ಒತ್ತುವಂತೆ ಇವನ ಆಪ್ತ ಕಾರ್ಯದಶಿಯನ್ನು ಪ್ರೇರೇಪಿಸಿದರು. ಗವಾನನು ಬರೆದಂತೆ ಪತ್ರವೊಂದನ್ನು ಬರೆದು ಅದನ್ನು ಸುಲ್ತಾನನ ಮುಂದಿಟ್ಟನು. ಅದರಲ್ಲಿ ರಾಜನ ಕುಡಿತದ ಚಟ ಮತ್ತು ಕ್ರೂರತನದಿಂದ ಜನರು ಬೇಸತ್ತಿದ್ದಾರೆಂದು. ಅದಕ್ಕೋಸ್ಕರ ಒರಿಸ್ಸಾದ ರಾಜನು ಬಹಮನಿಯ ಮೇಲೆ ದಾಳಿ ಮಾಡಬೇಕೆಂದು ಬರೆದರು. ನಂತರ ಈ ಪತ್ರವನ್ನು ರಾಜನ ಕುಡಿತ ಅಮಲಿನಲ್ಲಿರುವಾಗ ಓದಲಾಯಿತು. ಇದನ್ನು ಓದಿದ ಸುಲ್ತಾನ ಕೂಡಲೇ ಗವಾನನಿಗೆ ರಾಜದ್ರೋಹದ ಅಪಾದನೆಯಂತೆ ಮರಣ ದಂಡನೆಗೆ ಒಳಪಡಿಸಿದ ಎಪ್ರಿಲ್ ೧೫ ೧೪೮೧ ರಂದು ಗವಾನಗೆ ಗಲ್ಲು ಶಿಕ್ಷೆಯಾಯಿತು. ಅನಂತರ ಸತ್ಯ ಹೊರಬಂದ ಮೇಲೆ ಸುಲ್ತಾನ ಮೂರನೇ ಮಹಮದಷಾ ಓರ್ವ ಪ್ರಾಮಾಣಿಕ ವ್ಯಕ್ತಿಯನ್ನು ಕಳೆದುಕೊಂಡ ಕೊರಗಿನಲ್ಲೆ ತೀರಿಕೊಂಡನು. ಮಹಮದ್‌ನ ಮರಣದ ನಂತರ ನಾಲ್ಕನೇ ಮಹಮದ್ ಆಳ್ವಿಕೆಗೆ ಬಂದನು. ಅಂದು ಒಳಜಗಳಗಳು ಗುದ್ದಾಟ ಮತ್ತು ವರ್ಗ ಸಂಘರ್ಷಗಳ ಆತಂಕಕಾರಿ ಯುಗ ಆರಂಭವಾಯಿತು. ಇದು ಬಹಮನಿ ರಾಜ್ಯವನ್ನು ಶಿಥಿಲಗೊಳಿಸಿತು. ಸುಲ್ತಾನನು ತನ್ನ ಮಂತ್ರಿ ನಿಜಾಮ್-ಉಲ್-ಮುಲ್ಕನ್ ಅಸಾಹಯಕ ಕೈಗೊಂಬೆಯಾದ. ಅವ್ಯವಸ್ಥೆ ಎಲ್ಲೆಡೆಯಲ್ಲೂ ಕ್ಷಿಪ್ರವಾಗಿ ಪ್ರಸರಿಸುತ್ತು. ಭವ್ಯವಾಗಿ ನಿರ್ಮಾಣವಾಗಿ ಬಾಳಿದ ಬಹಮನಿ ರಾಜ್ಯ ವಿಘಟನೆಗೆ ಗುರಿಯಾಯಿತು. ಬಹಮನಿ ವಿಭಜನೆಯಾಗಿ ಸಿಡಿದು ಹೋದ ಮೊದಲ ರಾಜ್ಯ ಬಿಜಾಪುರ ಯೂಸುಫ ಆದಿಲ್‌ಷಾ ಬಿಜಾಪುರದಲ್ಲಿ ತನ್ನದೇ ಆದ ಆದಿಲ್ ಷಾಹಿ ರಾಜ್ಯ ಸ್ಥಾಪಿಸಿದ. ಇವನನ್ನು ಅನುಸರಿಸಿ ಮಲಿಕ್ ಅಹಮದ್‌ನು ಅಹಮದ ನಗರದಲ್ಲಿ ನಿಜಾಮಷಾಹಿ ವಂಶವನ್ನು, ಇಮಾದ್-ಆಲ್-ಮುಲ್ಕನು ಬೀರಾರಿನಲ್ಲಿ ಕಾಸಿಂಬರೀದ್‌ನು ಬೀದರನಲ್ಲೂ ಕುತ್ಬ ಆಲ್ ಮುಲ್ಕನು ಗೋಲ್ಕೊಂಡದಲ್ಲೂ ರಾಜ್ಯಗಳನ್ನು ಸ್ಥಾಪಿಸಿದರು.

ಬಹಮನಿ ರಾಜ್ಯವು ಕೇವಲ ಬೀದರ ಮತ್ತು ಸುತ್ತಲಿನ ಪ್ರದೇಶಕ್ಕೆ ಸೀಮಿತವಾಯಿತು. ಪ್ರಧಾನಿಗಳಾದ ಅಮೀರ್ ಬರೀದ ಮತ್ತು ಕಾಸಿಂ ಬರೀದರು ಪೂರ್ಣ ಅಧಿಕಾರವನ್ನು ದೋಚಿದರು. ಬಹಮನಿ ರಾಜ್ಯ ಒಡೆದು ಐದು ಷಾಹಿ ಮನೆತನಗಳು ಈ ರೀತಿ ಇವೆ.

೧) ಬಿಜಾಪುರದ ಆದಿಲ್‌ಷಾಹಿ

೨) ಬೀದರಿನ ಬರೀದ್‌ಷಾಹಿ

೩) ಗೋಲ್ಕೊಂಡದ ಕುತುಬ್‌ಷಾಹಿ

೪) ಅಹಮದ ನಗರದ ನಿಜಾಮ್‌ಷಾಹಿ

೫) ಬಿರಾರಿನ ಇಮ್ಮಾದ್‌ಷಾಹಿ

**೩.೭) ದೋಣಿ ಕದನ ಕ್ರಿ ಶ ೧೫೧೦ :**

ಬಿಜಾಪುದ ಸುಲ್ತಾನ ಯೂಸಫ್ ಆದಿಲ್‌ಷಾ ಬಹಮನಿಯ ಸುಲ್ತಾನ ನಾಲ್ಕನೇ ಮಹಮ್ಮದಷಾನ ಜೊತೆಗೂಡಿ ಇತರ ಮುಸ್ಲಿಂ ಶ್ರೀಮಂತರೊಡಗೂಡಿ ವಿಜಯನಗರದ ಕೃಷ್ಣ ದೇವರಾಯನ ಮೇಲೆ ಯುದ್ಧ ಸಾರಿದರು. ವಾರ್ಷಿಕ ಕಪ್ಪು ಕಾಣಿಕೆ ವಿಜಯನಗರದಿಂದ ಬಾರದಿದ್ದುದೇ ಈ ಯುದ್ಧಕ್ಕೆ ಕಾರಣವಾಯಿತು.

"ಮುಸ್ಲಿಂ ಸುಲ್ತಾನರು ದಕ್ಷಿಣದ ಕಡೆಗೆ ವಿಜಯನಗರದತ್ತ ಹೊರಟು ಹೊಸದಾಗಿ ಅಧಿಕಾರಕ್ಕೆ ಬಂದ ಕೃಷ್ಣದೇವರಾಯನು ತಮ್ಮನ್ನು ಎದುರಿಸಲಾಗದೆ ಪರಾಜಿತನಾಗುತ್ತಾನೆಂಬ ದೃಢ ನಂಬಿಕೆಯಿಂದ ಅವನ ಸಾಮ್ರಾಜ್ಯದ ಗಡಿಯವರೆಗೆ ದಂಡೆತ್ತಿ ಬಂದರು. ಆದರೆ ಈಗಾಗಲೇ ಸೈನ್ಯವನ್ನು ಸಜ್ಜುಗೊಳಿಸಿದ್ದ ಕೃಷ್ಣ ದೇವರಾಯನು ಬಹುಮನಿ ಸೈನ್ಯವನು ದೋಣಿ ಎಂಬಲಿ ತಡೆದನು. ಇಲ್ಲಿ ಎರಡು ಸೈನ್ಯದ ನಡುವೆ ಭೀಕರ ಕಾಳಗ ನಡೆಯಿತ್ತು. ಬಹಮನಿ ಸೈನಿಕರು ಸೋತು ಪಲಾಯನ ಗೈದರು. ತೀವ್ರವಾಗಿ ಗಾಯಗೊಂಡ ಸುಲ್ತಾನ ಮಹಮದಷಾ ಆಸೆ ಭಗ್ನಗೊಂಡಂತಾಗಿ ಬೀದರಗೆ ಓಡಿಹೋದನು"[೫೩]

ವಿಜಯನಗರದ ಸೈನಿಕರು ಬಹಮನಿ ಸೈನ್ಯವನ್ನು ಬೆನ್ನಟ್ಟಿಕೊಂಡು ಹೋಗಿ ಕೊವಿಲಕೊಂಡದಲ್ಲಿ ಮತ್ತೊಮ್ಮೆ ಸೋಲಿಸಿದರು. ಇಲ್ಲಿ ನಡೆದ ಕಾಳಗದಲ್ಲಿ ಬಿಜಾಪುರದ ಯೂಸಫ್ ಆದಿಲ್‌ಷಾ ಮರಣವನ್ನಪ್ಪಿದನು. ಇಂತಹ ಪರಿಸ್ಥಿತಿಯಲ್ಲಿ ಬಿಜಾಪುರದಲ್ಲಿ ಅರಾಜಕತೆಯುಂಟಾಯಿತು. ಈ ಅರಾಜಕತೆಯ ಸದುಪಯೋಗ ಪಡೆದುಕೊಂಡ ರಾಯನು ಕೃಷ್ಣಾ ತುಂಗಭದ್ರ ನಡುವಿನ ಪ್ರದೇಶದ ಕಡೆ ಸಾಗಿ ೧೫೧೨ ರಲ್ಲಿ ರಾಯಚೂರಿಗೆ ಮುತ್ತಿಗೆ ಹಾಕಿ ಅದನ್ನು ವಶಪಡಿಸಿಕೊಂಡನು.

**೩.೮) ಗುಲಬರ್ಗಾ ಕದನ ಕ್ರಿ ಶ ೧೫೧೨ :**

ರಾಯನು ೭,೩೬೦೦೦ ಸೈನಿಕರೊಂದಿಗೆ ಹೊರಟು ಕೃಷ್ಣಾ ತುಂಗಭದ್ರ ನದಿಗಳ ಮಧ್ಯದ ಪ್ರದೇಶವಾದ ದೋಆಬ್‌ನ್ನು ಆಕ್ರಮಿಸಿದ ನಂತರ ರಾಯಚೂರು, ಮುದಗಲ್ ಮತ್ತು ಗುಲಬರ್ಗಾ ಕೋಟೆಗಳನ್ನು ಮುತ್ತಿ ಬಿಜಾಪುರ ಸೈನ್ಯವನ್ನು ಸೋಲಿಸಿದ. ಗುಲಬರ್ಗಾ ಪ್ರದೇಶ ವಶಪಡಿಸಿಕೊಂಡ ನಂತರ ಬಹಮನಿ ಸೈನ್ಯ ಬೀದರ ಕಡೆಗೆ ಹಿಂದಕ್ಕೆ ಸರಿಯಿತು. ಅಲ್ಲಿಯ ಮಂತ್ರಿಯಾದ ಅಮೀರ್ ಬರೀದನು ಸುಲ್ತಾನ ಮಹಮದ್ ವಲಿವುಲ್ಲಾನನ್ನು ನಿಜವಾದ ಬಹಮನಿ ಸುಲ್ತಾನರ ಮಕ್ಕಳನ್ನು

ಬೀದರ್ ಸೇರೆ ಮನೆಯಲ್ಲಿಟ್ಟಿನು. ರಾಯನು ಗುಲಬರ್ಗಾ ಮತ್ತು ಬೀದರಗೂ ತನ್ನ ಸೈನ್ಯವನ್ನು ನುಗ್ಗಿಸಿ ಅವುಗಳನ್ನು ತನ್ನ ಅಧಿನಕ್ಕೆ ತೆಗೆದುಕೊಂಡನು. ಸೆರೆಯಾಳಾಗಿದ್ದ ಸುಲ್ತಾನನ್ನು ಬಂಧನದಿಂದ ಬಿಡುಗಡೆಗೊಳಿಸಿ ಅವನನ್ನು ಬಹಮನಿಯ ಸುಲ್ತಾನನ್ನಾಗಿ ಮರುನೇಮಕ ಮಾಡುವ ಮೂಲಕ ಕೃಷ್ಣಾದೇವರಾಯ 'ಯವನ ರಾಜ್ಯ ಪ್ರತಿಷ್ಟಾಪನಾಚಾರ್ಯ' ಎಂದು ಬಿರುದನ್ನು ಪಡೆದನು.

**೩೯) ರಾಯಚೂರ ಕಾಳಗ ಕ್ರಿಶ ೧೫೨೦ :**

ಬಿಜಾಪುರ ಇಸ್ಮಾಯಿಲ್ ಆದಿಲ್‌ಷಾಹನು ವಿಜಯನಗರದ ವಶದಲ್ಲಿದ ರಾಯಚೂರ ಕೋಟ ವಶಪಡಿಸಿಕೊಂಡ ಕಾರಣ ವಿಜಯನಗರದ ಕೃಷ್ಣದೇವರಾಯ ಅದಿಲ್‌ಷಾನ ಮೇಲೆ ಆಕ್ರಮಣ ಮಾಡಲು ಮತ್ತು ರಾಯಚೂರಿನ ವಾದಗ್ರಸ್ತ ಕೋಟೆಯನ್ನು ಕಡೆಯದಾಗಿ ವಶಪಡಿಸಿಕೊಳ್ಳಲು ನಿರ್ಧರಿಸಿದನು.

ಕೃಷ್ಣದೇವರಾಯ ತನ್ನ ಸೈನ್ಯವನ್ನು ಶೇಖರಿಸಿ ಅಪಾರ ದಂಡಿನೊಂದಿಗೆ ವಿಜಯನಗರದಿಂದ ಈಶಾನ್ಯ ದಿಕ್ಕಿನಲ್ಲಿ ಸಾಗಿದ ಅದು ಒಣಹವೆಯ ಋತುವಾಗಿತ್ತು. "ನ್ಯೂನಿಜ ಪ್ರಕಾರ ಅವನ ಸೈನ್ಯ ೭,೩೬,೦೦೦ ಮತ್ತು ೫೫೦ ಆನೆಗಳಿದ್ದವು ಎನ್ನಲಾಗಿದೆ"[೫೪] ರಾಯಚೂರಿನ ಪೂರ್ವದ ಬದಿಗೆ ಬಂದು ಬಿಡಾರ ಹೂಡಿದನು. ಇದನ್ನು ತಿಳಿದ ಇಸ್ಮಾಲ್ ಆದಿಲ್‌ಷಾ ವಿಜಾಪುರದಿಂದ ೧,೪೦,೦೦೦ ಅಶ್ವಾಳು ಮತ್ತು ಕಾಲಾಳುಗಳೊಂದಿಗೆ ಕೃಷ್ಣಾದ ಉತ್ತರಕ್ಕೆ ಬಂದು ಬಿಡಾರ ಹೂಡಿದನು. ಸೈನ್ಯಕ್ಕೆ ಕೆಲವು ದಿನಗಳ ವಿಶ್ರಾಂತಿ ನೀಡಿ ಸುಲ್ತಾನ ನದಿಯನ್ನು ದಾಟಿದನು. "ಕ್ರಿ. ಶ ೧೫೨೦ ಮೇ ೧೯ ಶನಿವಾರ ಬೆಳಗ್ಗೆ ಸೈನ್ಯಗಳು ಯುದ್ಧದಲ್ಲಿ ತೊಡಗಿದವು ಮತ್ತು ಭೀಕರ ನಿರ್ಣಾಯಕ ಯುದ್ಧವಾಯಿತು."[೫೫]

ಕೃಷ್ಣದೇವರಾಯ ತನ್ನ ಎರಡು ಮುಂದಾಳುಗಳನ್ನು ತನ್ನ ನೇರ ಮುಂಭಾಗಕ್ಕೆ ಮುನ್ನಡೆಯಲು ಆಜ್ಞಾಪಿಸಿದ. ಅವುಗಳ ಆಕ್ರಮಣ ಮಹಮ್ಮದೀಯರನ್ನು ತಮ್ಮ ಕಂದಕಗಳಿಗೆ ಹಿಮ್ಮೆಟ್ಟಿಸುವಷ್ಟು ಯಶಸ್ವಿಯಾಯಿತು. ರಾಯನು ಹಾಗೆಯೇ ಮಾಡುವನೆಂದು ನಿರೀಕ್ಷಿಸಿ ಸುಲ್ತಾನನು ತನ್ನ ಸೈನ್ಯವನ್ನು ತೀರ ವ್ಯಾಪಕ ಪ್ರದೇಶದಲ್ಲಿ ಹರಡಿದ ಮಧ್ಯದಲ್ಲಿ ತಾನು ದುರ್ಬಲನಾಗಿರುವುದನ್ನು ತಿಳಿದು ತೋಪುಗಳನ್ನು ಹಾರಿಸಿದ. ವಿಜಯನಗರ ಸೈನ್ಯ ಸಾಲುಗಳಲ್ಲಿ ಬಹಳ ನಷ್ಟ ಉಂಟುಮಾಡಿದ. ಈ ಬಿರುಸಾದ ಗುಂಡಿನ ಸುರಿಮಳೆಯ ಸಮ್ಮುಖದಲ್ಲಿ ರಾಯನ ಸೈನ್ಯ ಹಿಂದೆ ಸೇರಿದವು ಮತ್ತು ವೈರಿಗಳು ತಕ್ಷಣ ಅವರ ಮೇಲೆ ಮುಗಿಬಿದ್ದರು. ದಿಕ್ಕೆಟ್ಟ ವಿಜಯನಗರ ಸೈನ್ಯ ಓಟವಾಗಿ ಬದಲಾಯಿತು. ಮತ್ತು ಬಹಮನಿ ಅಶ್ವದಳ ತಮ್ಮ ನೇರ ಮುಂದಿನ ಒಂದೂವರೆ ಮೈಲಿನವರೆಗೆ ಕೃಷ್ಣದೇವರಾಯನ ಪ್ರಥಮ ಸಾಲಿನಲ್ಲಿ ಓಡುತ್ತಿದ್ದ ಸೈನಿಕರನ್ನು ಬೆನ್ನಟ್ಟಿದರು. ಎರಡನೆಯ ಸಾಲಿನ ಆಧಿಪತ್ಯ ವಹಿಸಿದ ರಾಜನು ವಿಜಯದ ಬಗೆಗೆ ನಿರಾಶೆ ಹೊಂದಿದನಾದರೂ ತನ್ನ ಸೈನ್ಯಗಳನ್ನು ಪುನಃ ವ್ಯೂಹ ಕಟ್ಟಿ ಅನೇಕ ಸರದಾರರನ್ನು ತನ್ನ ಸುತ್ತ ಒಟ್ಟುಗೊಡಿಸಿ ತನಗೆ ಯಾವಾಗಲೂ ಸಹಜವಾಗಿದ್ದ ಧೈರ್ಯದಿಂದ ಮೃತ್ಯವನ್ನೆದುರಿಸಲು ನಿರ್ಧರಿಸಿದನು. ತನ್ನ ಕುದುರೆಯೇರಿ ಅಳಿದುಳಿದ ದಳಗಳನ್ನೆಲ್ಲಾ ಮುನ್ನುಗ್ಗುವಂತೆ

ಆಜ್ಞಾಪಿಸಿದ. ಮತ್ತು ಈಗ ಅಸ್ತವ್ಯಸ್ತವಾಗಿದ್ದ ಬಹಮನಿ ಸೈನ್ಯದ ಸಾಲುಗಳ ಮೇಲೆ ಏರಿ ದಾಳಿಯಿಟ್ಟನು ಇದು ಸಂಪೂರ್ಣ ಯಶಸ್ಸಾಗಿ ಪರಿಣಮಿಸಿತು. ಏಕೆಂದರೆ ಹೋರಾಡುತ್ತ ಹರಡಿ ಹೋಗಿದ್ದ ಬಹಮನಿ ಸೈನ್ಯ ವ್ಯೂಹರಚಿಸಲು ಅಸಮರ್ಥವಾಗಿ ರಬಸದ ದಾಳಿಯಿಂದ ಪಲಾಯನಗೈದರು. ವಿಜಯನಗರ ಸೈನಿಕರು ಅವರನ್ನು ದಾರಿ ಯದ್ಧಕ್ಕೂ ಹೊಡೆದೋಡಿಸುತ್ತ ಮರಳಿ ನದಿಯೊಳಕ್ಕೆ ಅಟ್ಟಿದರು. ಅಲ್ಲಿ ಭಯಂಕರ ಸಂಹಾರ ನೆಡದು ಇಡಿ ಬಹಮನಿ ಸೈನ್ಯ ಓಡಲು ಪ್ರಾರಂಭಿಸಿತು.

"ತರುವಾಯ ರಾಯ ನದಿ ದಾಟಿ ಷಾನ ಠಾಣ್ಯವನ್ನು ವಶಪಡಿಸಿಕೊಂಡ. ಅಸದಖಾನನ ಸಲಹೆ ಹಾಗೂ ನೇರವಿನ ಮೇರೆಗೆ ಆದಿಲ್‌ಷಾ ಜೀವಉಳಿಸಿಕೊಂಡು ಆನೆಯ ಮೇಲೆ ಕುಳಿತು ರಣರಂಗದಿಂದ ಓಡಿಹೋದನು."[೫೬]

ನದಿಯತ್ತ ಹಿಂದೆ ಅಟ್ಟಲ್ಪಡುತ್ತಿದ್ದ ಶಾಹನ ದಂಡನಾಯಕ ಸಲಾಬಾತ್ ಖಾನ ಅಂದಿನ ಅದೃಷ್ಟವನ್ನು ಮರಳಿ ಪಡೆಯಲು ಧೀರ ಪ್ರಯತ್ನ ಮಾಡಿದ. ಇದ್ದ ಸೈನ್ಯದೊಂದಿಗೆ ವಿಜಯನಗರ ಮುನ್ನುಗ್ಗುತ್ತಿದ್ದ ಪಡೆಗಳ ಮೇಲೆ ಮುಗಿಬಿದ್ದನು. ಅವನು ಅರಸನ ದಂಡನ್ನು ಭೇದಿಸಿದ. ಹೆಚ್ಚು ಕಡಿಮೆ ಅವನನ್ನು ತಲುಪವವರೆಗೆ ಸೈನಿಕರನ್ನು ನಾಶಪಡಿಸುತ್ತ ದಾರಿ ಮಾಡಿಕೊಂಡರು. ಇಲ್ಲಿ ಸಲಾಬತ್‌ಖಾನ ಕುದುರೆ ಕಳೆದುಕೊಂಡ. ಕೂಡಲೆ ಇನ್ನೊಂದನ್ನೇರಿ ಮುನ್ನುಗಿದ. ಆದರೆ ಅಲ್ಪ ಸೈನ್ಯವನ್ನು ಸುತ್ತುಗಟ್ಟಿ ನಾಶಮಾಡಲಾಯಿತು. ಎರಡನೇಯ ಸಲ ಕುದುರೆಯಿಂದ ಕೆಳಕ್ಕೆ ಬಿದ್ದು ಕುದುರೆಯೊಂದಿಗೆ ಸೆರೆಸಿಕ್ಕನು.

ಸೂರೆ ವಿಪುಲವಾಗಿತ್ತು ಪರಿಣಾಮ ನಿರ್ಣಾಯಕವಾಗಿತ್ತು. ನಂತರ ಅನೇಕ ವರ್ಷಗಳವರೆಗೆ ಮಹಮ್ಮದಿಯ ಸೈನ್ಯ ಕೃಷ್ಣದೇವರಾಯ ಮತ್ತು ಅವನ ಸೈನಿಕರೆಂದರೆ ಬಲು ಭಯಪಡುತ್ತಿದ್ದರು. ಭೀತಿಗ್ರಸ್ಥ ಸುಲ್ತಾನನು ತನ್ನ ವೈರಿಯ ಜೀವಿತ ಕಾಲದಲ್ಲಿ ಇನ್ನೊಮ್ಮೆ ಎಂದೂ ವಿಜಯನಗರದ ಒಳ ರಾಷ್ಟ್ರಗಳ ಮೇಲೆ ಆಕ್ರಮಣ ಮಾಡಲೆತ್ನಿಸಲಿಲ್ಲ. ಗೆಲುವಿನಿಂದ ಹುರುಪಿಗೆದ್ದ ಕೃಷ್ಣದೇವರಾಯ ಕೊಡಲೆ ರಾಯಚೂರಿನ ಆಕ್ರಮಣಕ್ಕೆ ತೆರಳಿದ ಅಲ್ಪ ಕಾಲದ ನಂತರ ಆ ದುರ್ಗವನ್ನು ವಶಪಡಿಸಿಕೊಳ್ಳಲಾಯಿತು.

**೪೦) ಗುಲಬರ್ಗಾ ಮೇಲೆ ದಾಳಿ ಕ್ರಿ ಶ ೧೫೨೩ :**

ಕೃಷ್ಣದೇವರಾಯ ೧೫೨೦ ರಲ್ಲಿ ರಾಯಚೂರ ವಶಪಡಿಸಿಕೊಂಡಿದ್ದನು. ಕಾರಣ ಸುಲ್ತಾನ ಸೋಲಿನಿಂದ ಕಳೆದುಕೊಂಡಿದ್ದ ಪ್ರದೇಶವನ್ನು ಕೃಷ್ಣದೇವರಾಯ ತನಗೆ ಹಿಂದಕ್ಕೆ ಒಪ್ಪಿಸುವಂತೆ ರಾಯಭಾರಿಯನ್ನು ಕಳುಹಿಸಿದನು.

ರಾಯನು ಇದಕ್ಕೆ ಉತ್ತರವಾಗಿ ಸುಲ್ತಾನ ಮುದುಗಲ್ಲಿನ ಬಳಿ ತನ್ನನ್ನು ಭೇಟಿಯಾಗಿ ಕಾಲಿಗೆ ಬಿದ್ದು ಶರಣಾದರೆ ಆತನ ಮಾತನ್ನು ನಡೆಸಿ ಕೊಡುವುದಾಗಿ ಹೇಳಿಕಳುಹಿಸಿದನು. ಆದರೆ ಸುಲ್ತಾನ ರಾಜನ ಆಜ್ಞೆಯನ್ನು ಪಾಲಿಸದೇ ಸುಮ್ಮನಾದನು ಇದರಿಂದ ಸಿಟ್ಟಿಗೆದ್ದ ಕೃಷ್ಣದೇವರಾಯನು ಮೂರನೆ ಬಾರಿ ಬಿಜಾಪುರ ಸುಲ್ತಾನನ್ನು ೧೫೨೩ ರಲ್ಲಿ ಗುಲಬರ್ಗಾ ಸಮೀಪ ಸಗರದ ರಣರಂಗದಲ್ಲಿ ಎದುರಿಸಿ ಸೋಲಿಸಿದನು.

ಅಲ್ಲಿಂದ ರಾಯನ ಸೈನ್ಯ ಕಲಬುರ್ಗಿಯತ್ತ ತರೆಳಿ ಅಲ್ಲಿ ಬಂಧನದಲ್ಲಿಟ್ಟ ಎರಡನೆ ಮಹಮ್ಮದನ ಮೂರು ಮಕ್ಕಳನ್ನು ಮುಕ್ತಗೊಳಿಸಿದನು. ರಾಯನು ಬಹಮನಿಯ ರಾಜಕುಮಾರರಲ್ಲಿ ಹಿರಿಯವನನ್ನು ಗುಲಬರ್ಗಾದ ಸುಲ್ತಾನನಾಗಿ ಮಾಡಿ ಇನ್ನೀರರ್ವರನ್ನು ರಕ್ಷಣೆಗೋಸ್ಕರ ತನ್ನೊಡನೆ ರಾಜಧಾನಿಗೆ ಕರೆದುಕೊಂಡು ಬಂದನು. ಅವರನ್ನು ಗೌರವ ಪೂರ್ವಕವಾಗಿ ಕಂಡನು.

<>

## ಅಡಿಟಿಪ್ಪಣಿಗಳು

1. ಮುನಿಸ್ವಾಮಿ ಆರ್ (ಸಂ), ಕಾರ್ನಾಟಕ ರಾಜ್ಯ ಗ್ಯಾಸೆಟಿಯರ್ ವಿಜಾಪುರ ಜಿಲ್ಲೆ, 1999, ಪುಟ–121
2. ಅದೇ
3. ಪಾಟೀಲ ಎಂ.ಬಿ (ಸಂ) ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್, 1997 ಪುಟ–62
4. ಚೋಪ್ರಾ ಎನ್.ಪಿ, ಹಿಸ್ಟರಿ ಆಫ್ ಸೌತ್ ಇಂಡಿಯಾ ಭಾಗ 2 1979 ಪುಟ–64
5. ಮೂಲ :ರಾಬರ್ಟ್ ಸೆವೆಲ್: ಮರೆತುಹೋದ ಮಹಾ ಸಾಮ್ರಾಜ್ಯ ವಿಜಯನಗರ, ಅನು : ಸದಾನಂದ ಕನವಳ್ಳಿ, 2008. ಪುಟ–31
6. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಪರಪಂರೆ, ಸಂಪುಟ–2. 2006 ಬೆಂಗಳೂರು, ಪುಟ–60
7. ಮೂಲ : ರಾಬರ್ಟ್ ಸೆವೆಲ್, ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, ಅನು : ಸದಾನಂದ ಕನವಳ್ಳಿ. 2008. ಪುಟ–31
8. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು : ಕರ್ನಾಟಕ ಪರಪಂರೆ, ಸಂಪುಟ–2. 2006 ಪುಟ–60
9. ಮೂಲ : ರಾಬರ್ಟ್ ಸೆವೆಲ್, ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, ಅನು : ಸದಾನಂದ ಕನವಳಿ, 2008 ಪುಟ–32
10. ಅದೇ, ಪುಟ–33–34
11. ಅದೇ ಪುಟ–34
12. ಶಿವರುದ್ರ ಸ್ವಾಮಿ ಎಸ್.ಎನ್.ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ, 2006 ಪುಟ–296

11 ಅದೇ

12 ಶಿವರುದ್ರ ಸ್ವಾಮಿ ಎಸ್. ಎನ್: ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ, 2006 ಪುಟ–295

13 ಮೂಲ : ರಾಬರ್ಟ್ ಸೆವೆಲ್: ಮರೆತುಹೋದ ಮಹಾ ಸಾಮ್ರಾಜ್ಯ ವಿಜಯನಗರ, ಅನು : ಸದಾನಂದ ಕನವಳ್ಳಿ 2008 ಪುಟ–35

14 ಅದೇ

15 ಅದೇ

16 ಅದೇ, ಪುಟ–38

17 ಅದೇ, ಪುಟ–39

18 ನೀಲಕಂಠ ಶಾಸ್ತ್ರಿ ಕೆ.ಎ.: ಎ ಹಿಸ್ಟರಿ ಆಫ್ ಸೌತ್ ಇಂಡಿಯಾ 1976 ಪುಟ–244

19 ಬಹಮನಿ ಕಿಂಗ್‌ಡಮ್. ಕಾಮ್, 2009 ಜೂಲೈ 30 ಪುಟ–22

20 ಮೂಲ : ರಾಬರ್ಟ್ ಸೆವೆಲ್, ಮರೆತುಹೋದ ಮಹಾ ಸಾಮ್ರಾಜ್ಯ ವಿಜಯನಗರ, ಅನು : ಸದಾನಂದ ಕನವಳ್ಳಿ, 2008 ಪುಟ–43

21 ಅದೇ

22 ಶಿವರುದ್ರ ಸ್ವಾಮಿ ಎಸ್.ಎನ್, ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ, 2006 ಪುಟ–296

23 ಬಹಮನಿ ಕಿಂಗ್‌ಡಮ್. ಕಾಮ್2009 ಜುಲೈ 30 ಪುಟ–22

24 ಮುನಿಸ್ವಾಮಿ ಆರ್. (ಸಂ) ವಿಜಾಪುರ ಜಿಲ್ಲೆ ಗ್ಯಾಸೆಟಿಯರ್ 1999 ಪುಟ–122

25 ಶಿವರುದ್ರ ಸ್ವಾಮಿ ಎಸ್.ಎನ್ : ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ, 2006, ಪುಟ-297
26 ಮೂಲ ; ರಾಬರ್ಟ್ ಸೆವೆಲ್, ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ ಅನು : ಸದಾನಂದ ಕನವಳ್ಳಿ, 2008 ಪುಟ-54
27 ಅದೇ
28 ಸದಾಶಿವ ಕೆ. ಮಧ್ಯಯುಗಿನ ಭಾರತದ ಇತಿಹಾಸ, 2004 ಪುಟ-514
29 ಶಿವರುದ್ರ ಸ್ವಾಮಿ ಎಸ್.ಎನ್ ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ, 2006 ಪುಟ-297
30 ಬಹಮನಿ ಕಿಂಗ್‌ಡಮ್. ಕಾಮ್, 2009 ಜುಲೈ 30 ಪುಟ-24
31 ಚೋಪ್ರಾ ಎನ್. ಪಿ, ಹಿಸ್ಟರಿ ಆಫ್ ಸೌತ್ ಇಂಡಿಯಾ, ಭಾಗ-2, 1979, ಪುಟ-68
32 ಮೂಲ ; ರಾಬರ್ಟ್ ಸೆವೆಲ್, ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ ಅನು : ಸದಾನಂದ ಕನವಳ್ಳಿ , 2008 ಪುಟ-61
33 ಸದಾಶಿವ ಕೆ, ಮಧ್ಯಯುಗಿನ ಭಾರತದ ಇತಿಹಾಸ, 2004, ಪುಟ-514
34 ಮೂಲ ; ರಾಬರ್ಟ್ ಸೆವೆಲ್, ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ ಅನು : ಸದಾನಂದ ಕನವಳ್ಳಿ, 2008 ಪುಟ-63
35 ಬಹಮನಿ ಕಿಂಗ್‌ಡಮ್. ಕಾಮ್, 2009 ಜುಲೈ 30 ಪುಟ-26
36 ಪಾಟೀಲ ಎಂ.ಬಿ (ಸಂ), ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್ 1997
37 ಶಿವರುದ್ರ ಸ್ವಾಮಿ ಎಸ್,ಎನ್, ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ, 2006 ಪುಟ-298
38 ಮೂಲ: ರಾಬರ್ಟ್ ಸೆವೆಲ್‌ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ ಅನು : ಸದಾನಂದ ಕನವಳ್ಳಿ 2008 ಪುಟ-70
39 ಅದೇ
40 ಅದೇ
41 ಚೋಪ್ರಾ ಎನ್. ಪಿಹಿಸ್ಟರಿ ಆಫ್ ಸೌತ್ ಇಂಡಿಯಾ ಭಾಗ-2 1979, ಪುಟ-69
42 ಬಹಮನಿ ಕಿಂಗ್‌ಡಮ್. ಕಾಮ್, 2009 ಜುಲೈ 30 ಪುಟ-28
43 ಅದೇ, ಪುಟ-29
44 ಶಿವರುದ್ರ ಸ್ವಾಮಿ ಎಸ್,ಎನ್ ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ, 2006 ಪುಟ-300
45 ಮೂಲ: ರಾಬರ್ಟ್ ಸೆವೆಲ್, ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ ಅನು : ಸದಾನಂದ ಕನವಳ್ಳಿ, 2008 ಪುಟ-79
46 ಅದೇ
47 ಸದಾಶಿವ ಕೆಮಧ್ಯಯುಗಿನ ಭಾರತದ ಇತಿಹಾಸ 2004, ಪುಟ-515
48 ಬಹಮನಿ ಕಿಂಗ್‌ಡಮ್. ಕಾಮ್, 2009 ಜುಲೈ 30 ಪುಟ-35
49 ಅದೇ, ಪುಟ-36
50 ಅದೇ, ಪುಟ-37
51 ನೀಲಕಂಠ ಶಾಸ್ತ್ರಿ ಕೆ.ಎ. ಎ ಹಿಸ್ಟರಿ ಆಫ್ ಸೌತ ಇಂಡಿಯಾ, 1976, ಪುಟ-255
52 ಮೂಲ : ರಾಬರ್ಟ್ ಸೆವೆಲ್,ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ ಅನು : ಸದಾನಂದ ಕನವಳ್ಳಿ, 2008 ಪುಟ-105
53 ಸದಾಶಿವ ಕೆ. ಮಧ್ಯಯುಗಿನ ಭಾರತದ ಇತಿಹಾಸ 2004 ಪುಟ

54. ಮೂಲ: ರಾಬರ್ಟ್ ಸೆವೆಲ್ : ಮರೆತುಹೋದ ಮಹಾ ಸಾಮ್ರಾಜ್ಯ ವಿಜಯನಗರ
ಅನು : ಸದಾನಂದ ಕನವಳ್ಳಿ 2008 ಪುಟ-114

55. ಅದೇ : ಪುಟ-144

56. ಅದೇ : ಪುಟ-145

# ಅಧ್ಯಾಯ–೬
# ಸಮಾರೋಪ

ಹನ್ನೆರಡನೆಯ ಶತಮಾನದ ಅಂತ್ಯ ಭಾಗದಲ್ಲಿ ಸ್ಥಾಪಿತವಾದ ದೆಹಲಿ ಸುಲ್ತಾನಾಧಿಪತ್ಯವು ಸುಮಾರು ನೂರುವರ್ಷಗಳ ಕಾಲ ತನ್ನ ಗಮನವನ್ನೆಲ್ಲ ಉತ್ತರ ಭಾರತದಲ್ಲೆ ಕೇಂದ್ರಿಕರಿಸಿತ್ತು. ನಂತರ ದಖ್ಖನ್ ಮತ್ತು ಅದರಾಚೆ ಇರುವ ಪ್ರದೇಶಗಳನ್ನು ಕಬಳಿಸುವ ಯೋಜನೆ ಅದಕ್ಕೆ ಬಂದದ್ದು ಖಿಲ್ಜಿ ವಂಶದ ದೊರೆಗಳ ಕಾಲದಲ್ಲಿ. ದೆಹಲಿ ಸುಲ್ತಾನನಾದ ಅಲ್ಲಾವುದ್ದೀನ್ ಖಿಲ್ಜಿಯು (೧೨೯೬–೧೩೧೫) ರವರೆಗಿನ ಆಳ್ವಿಕೆಯಲ್ಲಿ, ದಕ್ಷಿಣ ರಾಜ್ಯಗಳಲ್ಲಿರುವ ಸಕಲ ಸಂಪತ್ತನ್ನು ಕೊಳ್ಳೆ ಹೊಡೆಯಬೇಕೆಂಬ ಆಸೆಯಿಂದ ತನ್ನ ದಂಡನಾಯಕ ಮಲ್ಲಿಕ್ ಕಾಫೂರನ ನೇತೃತ್ವದಲ್ಲಿ ದಾಳಿ ಇಟ್ಟ, ದಕ್ಷಿಣ ರಾಜ್ಯಗಳನ್ನು ಸೋಲಿಸಿ ಅಪಾರ ಸಂಪತ್ತನು ಕೊಳ್ಳೆ ಹೊಡೆದನು. ನಂತರ ತುಘಲಕ ಮನೆತನದ ಆಳ್ವಿಕೆಯಲ್ಲಿ ಮಹಮದ ಬಿನ್ ತುಘಲಕನ ದಕ್ಷಿಣ ಭಾರತದ ಮೇಲೆ ದಂಡಯಾತ್ರೆ ಕೊಗೊಂಡನು. ಇದರಿಂದ ಅನೇಕ ರಾಜ್ಯಗಳು ವಶಪಡಿಸಿಕೊಂಡಿದ್ದರಿಂದ ಇವನ ಕಾಲದಲ್ಲಿ ನಾನಾ ಭಾಗದಲ್ಲಿ ಜನರು ದಂಗೆಯೆದ್ದರು. ಆತನ ವಿಚಿತ್ರ ರೀತಿಯ ಆಡಳಿತದ ಪರಿಣಾಮವಾಗಿ ಅಲ್ಲಲ್ಲಿ ಕ್ರಾಂತಿಗಳು, ಪ್ರತಿಭಟನೆಗಳು ಕಂಡುಬಂದವು. ಅಂತಹ ಕ್ರಾಂತಿಯೊಂದರ ಶಿಶು ಬಹುಮನಿ ರಾಜ್ಯ. ಬಹಮನಿ ರಾಜ್ಯವು ೧೩೪೭ ರಲ್ಲಿ ಸ್ಥಾಪನೆಗೊಂಡು ಕರ್ನಾಟಕ ಚರಿತ್ರೆಯಲ್ಲಿ ತನ್ನದೆಯಾದ ಮಹತ್ವವನ್ನು ಪಡೆದುಕೊಂಡಿದೆ. ಬಹಮನಿ ರಾಜ್ಯ ಸ್ಥಾಪನೆಯ ಮುಂಚೆ ದಕ್ಷಿಣದಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೊಂಡಿತು. ಬಹಮನಿ ಇತಿಹಾಸವೆಂದಕ್ಕೆ ಅದು ಬಹಮನಿ ಮತ್ತು ವಿಜಯನಗರಗಳ ಹೋರಾಟವಾಗಿದೆ. ಅಲ್ಲದೆ ಅಧ್ಯಾಯನದಲ್ಲಿ ನಾವು ಬಹಮನಿಯ ರಾಜ್ಯಕ್ಕೆ ಸಂಬಂಧಿಸಿದ ಅವರ ಕಾಲದಲ್ಲಿ ನಡೆದ ಕಾಳಗಗಳನ್ನು ವ್ಯವಸ್ಥಿತವಾಗಿ

ಅಧ್ಯಯನ ನಡೆಸಿದ್ದೆವು. ಅಧ್ಯಯನದಲ್ಲಿ ವಿವಿಧ ಪ್ರಕಾರದ ಬರವಣಿಗೆ ದಾಖಲೆಗಳಾದ ಪುಸ್ತಕಗಳಿಂದ ವಿಷಯವನ್ನು ವ್ಯವಸ್ಥಿತವಾಗಿ ಸಂಗ್ರಹಿಸಲಾಗಿದೆ. ಬಹಮನಿ ರಾಜಮನೆತನವು ಇಸ್ಲಾಂ ಸಾಮ್ರಾಜ್ಯವನ್ನು ಸ್ಥಾಪಿಸುವ ಉದ್ದೇಶ ಹೊಂದಿದ್ದು ಅವರು ಸದಾ ಸ್ಥಳಿಯ ಅನ್ಯ ಧರ್ಮಗಳೊಂದಿಗೆ ಜಿಹಾದ್ ಧರ್ಮ ಯುದ್ಧದಲ್ಲಿ ತೊಡಗುತ್ತಿದ್ದರು. ಹೆಚ್ಚಿನ ದೊರೆಗಳು ಸಮರ್ಥವಾಗಿಲ್ಲದಿದ್ದರು ಸಹ ಅವರು ಅಧಿಕಾರದ ಮೇಲೆ ವ್ಯಾಮೋಹ ಹೊಂದಿದರು. ವಿಜಯನಗರ, ವಾರಂಗಲ್, ಗಜಪತಿ, ಮೂಹರ, ಖಾಂದೇಶ, ಗುಜುರಾತ, ಕೊಂಕಣ, ಪ್ರದೇಶಗಳ ಮೇಲೆ ಸದಾ ಯುದ್ಧಗದಲ್ಲಿ ತೊಡಗುತ್ತಿದ್ದರು. ಸುಮಾರು ೧೮೦ ವರ್ಷಗಳ ಆಳ್ವಿಕೆಯಲ್ಲಿ, ಅಂದರೆ ಕ್ರಿ.ಶ ೧೩೪೭ ರಿಂದ ೧೫೨೮ ವರೆಗಿನ ಅವಧಿಯಲ್ಲಿ ೧೮ ಜನ ಸುಲ್ತಾನರು ಆಳ್ವಿಕೆ ಮಾಡಿದರು. ಹೆಚ್ಚಿನ ಸುಲ್ತಾನರು ಆಂತರಿಕ ಕಾದಾಟ ಸಿಂಹಾಸನದ ಆಸೆಯಿಂದ ಕೊಲೆಗಿಡಾದರು. ಅನೇಕ ಸುಲ್ತಾನರು ಸಮರ್ಥರಾಗಿದ್ದು. ಅವರಲ್ಲಿ ಅಲ್ಲಾವುದ್ದೀನ್ ಹಸನ್ ಬಹಮನ್‌ಷಾ ಫಿರೋಜಷಾ, ಒಂದನೆ ಅಹಮದ್‌ಷಾ, ಹಾಗೂ ಪ್ರಧಾನಿಯಾಗಿದ್ದ ಮಹಮದ್ ಗವಾನರು, ಇದ ಕಾಲದಲ್ಲಿ ಬಹಮನಿ ರಾಜ್ಯವು ಅನೇಕ ಯುದ್ಧಗಳ ಮೂಲಕ ಸಾಮ್ರಾಜ್ಯ ವಿಸ್ತಾರವಾಗಿ ಬೆಳೆಸಿದರು. ಈ ಅವಧಿಯಲ್ಲಿ ನಡೆದ ಕಾಳಗಳು ಹೆಚ್ಚಿನದಾಗಿ ವಿಜಯನಗರ ಸಾಮ್ರಾಜ್ಯ ಜೊತೆಗೆ ನಡೆದವು. ಇದಕ್ಕೆ ಕಾರಣ ವಿಜಯನಗರ ಸಾಮ್ರಾಜ್ಯವು ಹೊಂದಿದ ಸಂಪತ್ತು. ಹಾಗೂ ಅವರು ಹೊಂದಿದ ಫಲವತ್ತಾದ ಭೂಮಿ.ವಾಣಿಜ್ಯದ ದೃಷ್ಟಿಯಿಂದ ಕರಾವಳಿ ಪ್ರದೇಶ ಅವರ ಅಧೀನದಲ್ಲಿತ್ತು. ವಿಜಯನಗರದವರು ಅನ್ಯ ಧರ್ಮದವರಾಗಿದ್ದರು ಇದರಿಂದ ಬಹಮನಿಯರು ಈ ಕಾರಣಗಳಿಂದ ಸದಾ ಯುದ್ಧದಲ್ಲಿ ತೊಡಗುತ್ತಿದ್ದರು.

ಬಹಮನಿ ಸುಲ್ತಾನರು ಸಮರ್ಥವಾದ ಸೇನಾ ಬಲ ಹೊಂದಿದ್ದರು ಈ ಸಾಮ್ರಾಜ್ಯದ ಸೈನಿಕ ಶಕ್ತಿ ಪ್ರಧಾನವಾಗಿದ್ದು ಬಲಿಷ್ಟ ರೀತಿಯಿಂದ ಕೂಡಿತ್ತು. ಅವರ ಅಸಂಖ್ಯಾತ ಸೈನ್ಯವು ಅವರ ಸೈನಿಕ ಪ್ರಧಾನ ರಾಜ್ಯವಾಗಿತ್ತೆಂಬುದನ್ನು ಖಚಿತಪಡಿಸುತ್ತದೆ. ತಮ್ಮ ರಾಜ್ಯದ ರಕ್ಷಣೆ ಮತ್ತು ವಿಸ್ತಾರಕ್ಕಾಗಿ ಬೃಹತ ಪ್ರಮಾಣದ ಸೈನ್ಯ ಸದಾ ಸಿದ್ದವಾಗಿರುತ್ತಿತ್ತು. ಇವರ ಸೈನ್ಯ ನುರಿತ ಹಾಗೂ ಪರಿಣಿತಿ ಪಡೆದ ನಾಯಕರಿಂದ ಪರ್ಶಿಯಾ ಟರ್ಕರ ಮಾದರಿಯಲ್ಲಿ ತರಬೇತಿ ಪಡೆದಿತ್ತು. ಕಾಲ್ದಳ ಅಶ್ವದಳ ಮತ್ತು ಫಿರಂಗಿ ಪಡೆಗಳು ಸೈನ್ಯದ ಪ್ರಮುಖ ಅಂಗಗಳಾಗಿದ್ದವು. ಸುಲ್ತಾನನ ರಕ್ಷಣೆಗಾಗಿ ಒಂದು ಅಂಗ ಪಡೆಯು ಸದಾ ಸಿದ್ದವಾಗಿರುತಿತ್ತು. ದಕ್ಷಿಣ ಭಾರತದಲ್ಲಿ ಪ್ರಥಮ ಬಾರಿಗೆ ಸಿಡಿಮದ್ದಿನ ಬಳಿಕ ತಂದವರು ಇವರೆ ಮೊದಲಿಗರು. ಸಿಡಿಮದ್ದಿನ ಬಳಕೆಯಿಂದ ಕೋಟೆಗಳ ನಿರ್ಮಾಣದಲ್ಲಿ ಬದಲಾವಣೆಗಳಾದವು. ಸಿಡಿಮದ್ದನ್ನು ಬಳಸಿ ಕೋಟೆಗಳನ್ನು ಧ್ವಂಸಪಡಿಸುತಿದ್ದರು. ಶರವೇಗದಲ್ಲಿ ಚಲಿಸುವ ಅಶ್ವದಳ ಹೊಂದಿತ್ತು. ಸೈನ್ಯದ ನೇತೃತ್ವವನ್ನು ಸುಲ್ತಾನ ವಹಿಸುತಿದ್ದ ಸೈನ್ಯ ಬಲದಿಂದ ಗೆದ್ದ ಪ್ರದೇಶಗಳಿಂದ ಅಪಾರ ಪ್ರಮಾಣದ ಕಪ್ಪವನ್ನು ವಸೂಲಿ ಮಾಡುತಿದ್ದರು. ಸೋತ ರಾಜ್ಯಗಳು ಸೇಡು ತೀರಿಸಿಕೊಳ್ಳಲು ಸದಾಕಾತುರದಿಂದ ಕುಳಿತು ಅವಕಾಶ ದೊರೆತಾಗ ಮತ್ತೆ ಯುದ್ಧ ಕೈಗೊಳುತಿದ್ದರು. ಅಲ್ಲದೆ ಬಹಮನಿ ಸಾಮ್ರಾಜ್ಯವು ತೆಲಂಗಾಣ ಹಾಗು ಪೂರ್ವದ ಕರಾವಳಿ ಹಾಗೂ ಓರಿಸ್ಸಾದದೊಂದಿಗೆ ಯುದ್ಧ ಕೈಗೊಳುತಿದ್ದರು. ತೆಲಂಗಾಣ ಪ್ರದೇಶದ ಗೋಲ್ಕೊಂಡಾ ವಜ್ರದ ಗಣಿಗೆ ಪ್ರಸಿದ್ಧವಾದ ಸ್ಥಳ

ಹಾಗು ಅಭದ್ಯವಾದ ಕೋಟೆಯಿಂದ ಕೂಡಿತ್ತು. ಈ ಪ್ರದೇಶಗಳೊಂದಿಗೆ ಸಹ ಕಾದಟಮಾಡಿದುಂಟು. ಇವರ ಕಾಳಗಗಳಿಂದ ದಕ್ಷಿಣ ಅನೇಕ ರಾಜಮನೆತನಗಳು ಅವನತಿ ಹೊಂದಿದವು. ಹಾಗು ಅಪಾರ ಪ್ರಮಾಣದ ಸಂಪತ್ತು ಲೂಟಿಯಾಯಿತು. ಅನೇಕ ಜನಸಮಾನ್ಯರು, ಸ್ತ್ರಿಯರು, ಪುರುಷರು ಕೊಲೆಯಾದರು. ದೋಅಬ್ ಪ್ರದೇಶದ ಜನ ಸದಾ ಭಯದ ವಾತಾವರಣದಲ್ಲಿ ಬದುಕುತಿದ್ದರು. ಯುದ್ಧದ ನಂತರ ಸೋತ ಪ್ರದೇಶಗಳಲ್ಲಿ ಲೂಟಿ ಅಪಾರವಾಗಿರುತಿತ್ತು. ಕಟ್ಟಡಗಳು ಧಾರ್ಮಿಕ ಸ್ಥಳಗಳು ದೇವಾಲಯಗಳು ಧ್ವಂಸಗೊಳಿಸುತಿದ್ದರು. ಅಪಾರ ಜನರನ್ನು ಸಾಯಿಸುತ್ತಿದ್ದರು. ಬಹುಮನಿ ಹಾಗೂ ವಿಜಯನಗರ ಮನೆತನಗಳು ಸ್ಥಾಪನೆಯಿಂದ ಅಂತ್ಯದವರೆಗೆ ಎರಡು ರಾಜ್ಯಗಳ ಮಧ್ಯ ಸರಣಿ ರೀತಿಯಲ್ಲಿ ಯುದ್ಧಗಳು ಜರುಗುತಿದ್ದವು. ಅಲ್ಲಾವುದ್ದೀನ ಬಹಮನಷಾನ ಕಾಲದಲ್ಲಿ ಎರಡು ರಾಜ್ಯಗಳ ಪ್ರಾರಂಭವಾದ ಕದನಗಳ ಅಂತ್ಯದವರೆಗೆ ಮುಂದುವರೆದವು. ಕೃಷ್ಣಾ ಮತ್ತು ತುಂಗಾಭದ್ರ ನದಿಗಳ ನಡುವಣ ದೋಆಬ್ ಪ್ರದೇಶವು ಅತ್ಯಂತ ಫಲವತ್ತತೆಯಿಂದ ಕೂಡಿತ್ತು. ಇಲ್ಲಿಯ ಜನರ ಆದಾಯ ಸಹ ಹೆಚ್ಚಾಗಿತ್ತು. ಈ ಪ್ರದೇಶವು ಎರಡು ರಾಜ್ಯಗಳ ಮಧ್ಯ ಸದಾ ಹೋರಾಟಕ್ಕೆ ಪ್ರಮುಖ ಕೇಂದ್ರವಾಗಿತ್ತು. ೧೩೬೬ ರಲ್ಲಿ ನಡೆದ ಒಂದನೆ ಮಹಮ್ಮದಷಾನ ದಾಳಿಯು ಅತ್ಯಂತ ಭೀಕರದಿಂದ ಕುಡಿದು ದೋಅಬ್ ವಶಪಡಿಸಿಕೊಂಡನಲ್ಲದೆ, ಅನೇಕ ಜನರು ಕೊಲೆಗಿಡಾದರು. ಅನೇಕರನ್ನು ಸೇರೆ ಹಿಡಿಯಲಾಯಿತು. ಬಹಮನಿಯಲ್ಲಿ ಅಸಮರ್ಥ ದೊರೆಗಳು ಬಂದಾಗ ಈ ಪ್ರದೇಶವನ್ನು ಕಳೆದುಕೊಳ್ಳತ್ತಿದ್ದರು. ನಂತರ ಬಂದ ಸಮರ್ಥ ದೊರೆಗಳು ಈ ಪ್ರದೇಶಗಳನ್ನು ವಶಪಡಿಸಿಕೊಳ್ಳಲು ಯುದ್ಧ ಕೈಗೋಳ್ಳುತ್ತಿದ್ದರು. ಈ ನಿರಂತರ ಯುದ್ಧಗಳಲ್ಲಿ ಅನೇಕ ಸಲ ಬಹಮನಿಯರು ವಿಜಯಗಳಿಸಿ ಸದಾ ವಿಜಯನಗರದಿಂದ ಅಪಾರ ಸಂಪತ್ತನ್ನು ವಸೂಲಿ ಮಾಡುತ್ತಿದ್ದರು. ಸ್ವಾಭಿಮಾನಿಗಳಾಗಿದ್ದ ವಿಜಯನಗರ ಅರಸರ ಪೊಗದಿಯನ್ನು ಕೂಡದೆ ಇದ್ದಾಗ ಅವರ ಮೇಲೆ ಜಿಹಾದ ಯುದ್ಧ ಕೈಗೊಳ್ಳುತ್ತಿದ್ದರು. ಯುದ್ಧದಲ್ಲಿ ದೊರೆತ ಸಂಪತ್ತು ಲೂಟಿ ಮಾಡುತಿದ್ದರು. ದೇವಾಲಯಗಳು ಮೂರ್ತಿಗಳು ಭಗ್ನಗೊಳಿಸುತ್ತಿದ್ದರು. ವಿಜಯನಗರದ ಮೇಲೆ ಮುಜಾಹಿದ್‌ದನ ದಾಳಿಗಳು ಫಿರೋಜಷಾ ಮಹಮದ ಗವಾನನ ದಾಳಿಗಳಿಂದ ಅನೇಕ ಹಿಂದು ದೇವಾಲಯಗಳು ನಾಶವಾದವು. ಅನೇಕ ಸುಲ್ತಾನರು ಧಾರ್ಮಿಕ ಅಸಹಿಷ್ಣಕರಾಗಿದ್ದು ಅನ್ಯ ಧರ್ಮದವರೆ ಮೇಲೆ ಜಿಹಾದ ಯುದ್ಧ ಕೈಗೊಳುತ್ತಿದ್ದರು. ಮಹಮದ ಗವಾನ ಕಾಲದ ದಾಳಿಗಳಿಂದ ಪೂರ್ವ ರಾಜ್ಯಗಳಲ್ಲಿ ಶಾಂತಿಕದಡಿತು. ಅವನು ಸಮರ್ಥ ನಾಯಕನಿದ್ದರು ಸಹ ಧರ್ಮ ಸಹಿಷ್ಣಕನಾಗಿರಲಿಲ್ಲ. ಇವನ ಪೂರ್ವರಾಜ್ಯಗಳ ಮೇಲಿನ ದಾಳಿಗಳಿಂದ ವಾರಂಗಲ್, ದೇವರಕೊಂಡ, ಮಚಲಿಪಟ್ಟಣಂ, ರಾಜಮುಂಡ್ರಿ, ಕಂಚಿ ಹಾಗೂ ರಾಮೇಶ್ವರಗಳು ಇವನ ಕಾಲದಲ್ಲಿ ಧ್ವಂಸಕ್ಕೆ ಒಳಗಾದವು. ಇದರ ಕಾಳಗಗಳಿಂದ ಅನೇಕ ಸಣ್ಣಪುಟ್ಟ ರಾಜ್ಯಗಳು ಪತನ ಹೊಂದಿದವು. ಕ್ರಿ.ಶ ೧೪೭೫ ರಲ್ಲಿ ವಾರಂಗಲ್ ಪತನ ಹೊಂದಿತ್ತು. ಅಲ್ಲಿಯ ಹಿಂದೂ ಮನೆತನ ಕೊನೆಗೊಂಡು ಮುಸ್ಲಿಂ ಅಧಿಕಾರಿ ನೇಮಕವಾದನು. ದಕ್ಷಿಣದ ಕೊಂಕಣ ಪ್ರದೇಶ, ಸಂಗಮೇಶ್ವರ ಪ್ರಾಂತ, ಉತ್ತರದ ಮಾಳವಾ, ಮಾಹುರ, ಗೊಂಡ್ವಾನ ಪ್ರದೇಶದ ಮನೆತನಗಳು ಪತನ ಹೊಂದಿ ಅಲ್ಲಿ ಬಹಮನಿಯ ಆಳ್ವಿಕೆ ಪ್ರಾರಂಭವಾಯಿತು.

ಕಾಳಗಗಳಲ್ಲಿ ಕೇವಲ ಬಹಮನಿ ಸೈನ್ಯ ವಿಜಯಿಗಳಾಗುತ್ತಿರಲಿಲ್ಲಾ, ಅನೇಕ ಸಲ ಬೇರೆ ರಾಜಗಳಿಂದ ಸೋಲನ್ನು ಅನುಭವಿಸುತಿದ್ದರು. ೧೩೭೫ ರಲ್ಲಿ ಬಕ್ಕರಾಯನು ಮುಜಾಹಿದ್‌ನನ್ನು ಸೋಲಿಸಿದನು. ನಂತರ ೧೪೨೨ ರಲ್ಲಿ ಫಿರೋಜಷಾನ ಮಹತ್ವಾಕಾಂಕ್ಷೆಯಿಂದ ವಿಜಯನಗರದ ಅರಸರಿಂದ ಹೀನಾಯ ಸೋಲನ್ನು ಅನುಭವಿಸಿ ಅನೇಕ ಪ್ರದೇಶಗಳು ಕಳೆದುಕೊಂಡರು.

ಬಹಮನಿ ರಾಜ್ಯವು ಆಂತರಿಕವಾಗಿ ಸುಭದ್ರತೆಯಿಂದ ಕೂಡಿರಲಿಲ್ಲ. ರಾಜ್ಯದಲ್ಲಿ ಸದಾ ಆಶಾಂತವಾದ ವಾತವರಣ ನೆಲಸಿತ್ತು. ಮೊದಲ ರಾಜಧಾನಿಯಾದ ಗುಲಬರ್ಗಾದಲ್ಲಿ ಅನೇಕ ರೀತಿಯ ಪಿತ್ತೂರಿಗಳು, ದಂಗೆಗಳು, ಕೊಲೆಗಳು ನಡೆಯುತಿದ್ದವು. ಸುಲ್ತಾನರ ಆಡಳಿತದಿಂದ ಬೇಸತ್ತು ಅನೇಕರು ಸ್ವಾತಂತ್ರವಾಗಿ ಆಳಲು ದಂಗೆ ಎಳುತಿದ್ದರು. ದಂಗೆಗಳು ಹತ್ತಿಕ್ಕಲು ಅನೇಕ ಕಾಳಗಳು ನಡೆಯುತಿದ್ದವು. ಆಸ್ಥಾನದಲ್ಲಿ ನಡೆಯುತಿದ್ದ ಪಿತ್ತೂರಿಗಳಿಂದ ಸುಲ್ತಾನ ಮುಜಾಹಿದ್, ದಾವುದ್‌ಖಾನ, ಘಿಯಾಸುದ್ದೀನ್, ಶಂಸುದೀನ್, ನಿಜಾಮ್‌ಷಾ, ಹುಮಾಯೂನ್‌ಷಾ ಮೊದಲಾದ ಸುಲ್ತಾನರು ಕೊಲೆಗಿಡಾದರು. ಅನೇಕ ಸುಲ್ತಾನರ ಅವಿವೇಕಿಗಳಾಗಿದ್ದು ಹೆಸರಿಗೆ ಮಾತ್ರ ಸುಲ್ತಾನರಾಗಿದದ್ದರು. ರಾಜ್ಯದಲ್ಲಿ ನಡೆಯುತಿದ್ದ ಆಂತರಿಕ ಪಿತ್ತೂರಿಗಳಿಂದ ಬೇಸರಗೊಂಡ ಒಂದನೆ ಅಹಮ್‌ದಷಾನು ರಾಜಧಾನಿಯನ್ನು ಗುಲಬರ್ಗಾದಿಂದ ಬೀದರಗೆ ವರ್ಗಾಯಿಸಿದನು. ಬೀದರ ರಾಜ್ಯದ ಮಧ್ಯ ಇರುವುದರಿಂದ ಹಾಗೂ ಭೌಗೋಳಿಕವಾಗಿ ತಂಪಾದ ಹಿತಕರ ವಾಯುಗುಣ ಹೊಂದಿತು. ರಾಜಧಾನಿಯ ವರ್ಗಾವಣೆಯಿಂದ ರಾಜ್ಯದ ಮೇಲೆ ಪದೆ ಪದೆ ನಡೆಯುತ್ತಿದ್ದ ವಿಜಯನಗರ ದಾಳಿಯು ತಪ್ಪಿಸಿದಂತಾಯಿತು. ಬಹುಮನಿಯ ಸುಲ್ತಾನರು ಕೇವಲ ಇವರೇ ಆಕ್ರಮಣ ಕೈಗೊಳ್ಳುತ್ತಿರಲಿಲ್ಲ. ಬಹಮನಿಯಲ್ಲಿ ಅಸಮರ್ಥ ದೊರೆಗಳು ಬಂದಾಗ ಬೇರೆ ರಾಜ್ಯದವರು ಆಕ್ರಮಣ ಕೈಗೊಳ್ಳುತ್ತಿದ್ದರು. ಉತ್ತರದ ಭಾರತದ ಮಾಳವಾ ಸುಲ್ತಾನ ಹಾಗೂ ಗೊಂಡ್ವಾನ ಅರಸರು ಬಹಮನಿಯ ಮೇಲೆ ಅನೇಕ ಯುದ್ಧ ಕೈಗೊಂಡರು. ಪೂರ್ವ ರಾಜ್ಯಗಳಾದ ತೆಲಂಗಾಣದ ಕಾಕತೀಯರು ಹಾಗೂ ಓರಿಸ್ಸಾದ ಗಜಪತಿ ದೊರೆಗಳು ಇವರ ಪ್ರದೇಶಗಳ ಮೇಲೆ ದಾಳಿ ಇಡುತ್ತಿದ್ದರು. ಹಾಗು ದಕ್ಷಿಣದ ವಿಜಯನಗರ ಅರಸರು ದೋಅಬ್ ಪ್ರದೇಶ ವಶಪಡಿಸಿಕೊಳ್ಳಲು ಸದಾ ಆಕ್ರಮಣ ಮಾಡುತಿದ್ದರು. ಇವುಗಳನ್ನು ತಡೆಯಲು ಬಹುಮನಿ ಸುಲ್ತಾನರು ಸದಾ ಯುದ್ಧದಲ್ಲಿ ತೊಡಗಿರುತಿದ್ದರು. ಬಹಮನಿ ಆಳ್ವಿಕೆ ಕಾಲದಲ್ಲಿ ಅನೇಕ ವಿದೇಶಿಯರು ಬಂದ ರಾಜ್ಯದಲ್ಲಿ ನೆಲಸಿದರು. ಅದರಲ್ಲಿ ಹೆಚ್ಚಾಗಿ ಪರ್ಶಿಯನ್ ಇರಾನಿಗಳಾಗಿದ್ದರು. ಇವರು ರಾಜ್ಯದಲ್ಲಿ ಅನೇಕ ಉನ್ನತ ಹುದ್ದೆಯಲ್ಲಿದ್ದರು. ಇವರನ್ನು ಆಫಾಕೀಗಳೆಂದು ಕರೆಯುತಿದ್ದರು, ಇವರು ಮತ್ತು ಸ್ಥಳಿಯ ದಖ್ಖನಿ ಮುಸ್ಲಿಂರ ಬಗ್ಗೆ ಸದಾ ಆಂತರಿಕ ಒಳಜಗಳಗಳು ಪ್ರಾರಂಭವಾದವು. ಆಫಾಕೀಯರ ಏಳ್ಗೆಯನ್ನು ದಖ್ಖನಿಯರ ಸಹಿಸಿಕೊಳ್ಳಲಿಲ್ಲ. ಇದು ಮುಂದೆ ಸಾಮ್ರಾಜ್ಯಕ್ಕೆ ಮಾರಕವಾಯಿತು. ಹಾಗೂ ಸಾಮ್ರಾಜ್ಯ ವಿಘಟನೆಗೊಂಡಿತು.

ಬಹಮನಿ ರಾಜ್ಯವು ಸ್ಥಾಪನೆಯಿಂದ ಅದು ವಿಘಟಿತವಾಗಿ ಐದು ಷಾಹಿ ರಾಜ್ಯಗಳಾಗಿ ಒಡೆದು ಹೋಗುವರೆಗೆ ಸಕಲ ಕ್ಷೇತ್ರದಲ್ಲಿ ಅದು ಪ್ರಗತಿಯನ್ನು ಸಾಧಿಸಿತು. ನಂತರ ಆಂತರಿಕ ಪ್ರಾಂತಾಧಿಕಾರಿಗಳು ಪ್ರಾಭಲ್ಯರಾಗಿ ಅವರು ಸ್ವಾತಂತ್ರವನ್ನು ಘೋಷಿಸಿಕೊಂಡರು ಹಾಗು ಬಹಮನಿ

ರಾಜ್ಯವು ವಿಘಟಿತವಾಯಿತು. ನಾವು ಬಹಮನಿ ರಾಜ್ಯದ ಇತಿಹಾಸವನ್ನು ನೋಡಿದರೆ ಹದಿನೆಂಟು ಮಂದಿ ಸುಲ್ತಾನರು ಆಳಿದರು. ಅದರಲ್ಲಿ ಹೆಚ್ಚು ಮಂದಿ ಪ್ರಜಾಕಂಟಕರೂ, ಸ್ವಾರ್ಥಿಗಳು, ವಿಷಯಲಂಪಟರೂ, ಧರ್ಮಾಂಧರೂಆಗಿದ್ದರು. ದ್ವೇಷ, ಮತ್ಸರ, ಸಂಕುಚಿತ ಮನೋಭಾವನೆ, ಸ್ವಪ್ರತಿಷ್ಠೆ ಅವರ ಪ್ರಧಾನ ಲಕ್ಷಣಗಳಾಗಿದ್ದವು. ಅವರ ಕಾಲವು ಯುದ್ಧ ಪ್ರಧಾನವಾದ ಕಾಲವಾಗಿತ್ತು. ಹಿಂದೂ ರಾಜ್ಯಗಳೊಡನೆ ಯುದ್ಧ ಮಾಡಿ ಅವರ ರಕ್ತಕೊಡಿಯನ್ನು ಹರಿಸಿದರು. ಐಶ್ವರ್ಯವನ್ನು ಲೂಟಿಮಾಡಿದರು. ಪ್ರಜೆಗಳನ್ನು ಹಿಂಡಿ ಹೀರಿದರು ಹಿಂದೂ ಸಂಸ್ಕೃತಿಯ ಕೇಂದ್ರಗಳನ್ನು ಧ್ವಂಸ ಮಾಡಿದರು. ಹಿಂದೂಗಳ್ಳು ಮತಾಂತರಗೊಳಿಸಿದರು. ಮತ್ತು ದೇಶದ ಆರ್ಥಿಕ ಪರಿಸ್ಥಿತಿಯನ್ನು ಅಸ್ತವ್ಯಸ್ತಗೊಳಿಸಿದರು. ಅಶಾಂತಿ, ಅವ್ಯವಸ್ಥೆ, ರಕ್ತಪಾತ, ಕೊಲೆ, ಸುಲಿಗೆ, ಲೂಟಿ, ಕಳ್ಳತನ, ಮೋಸ ಇವೇ ಮುಂತಾದ ಭಯೋತ್ಪದಕ ಚಟುವಟಿಕೆಗಳು ರಾಜ್ಯದಲ್ಲಿ ಸರ್ವೆ ಸಾಮಾನ್ಯವಾಗಿದ್ದವು. ಸುಲ್ತಾನರು ಪಾನಗೋಷ್ಠಿ ಸಂಗೀತಗೋಷ್ಠಿಗಳಲ್ಲಿ ಭಾಗವಹಿಸುತಿದ್ದರು. ನೀರಿಗಿಂತ ರಕ್ತವು ಗಟ್ಟಿ ಸುಲ್ತಾನರು ಬೇರೆಯವರಿಗಿಂತ ಸ್ವಜಾತಿಯವರನ್ನು ಹೆಚ್ಚು ಪ್ರೀತಿಸುತಿದ್ದರು. ಬಹುಮನಿ ರಾಜ್ಯವು ವಿಸ್ತಾರಗೊಂಡತೆ ಇಸ್ಲಾಂ ಮತವೂ ಪಸರಿಸಿತು. ಇಸ್ಲಾಂ ಮತದ ಅಭಿವೃದ್ಧಿಗೆ ಅವರು ವಿಶೇಷ ಪ್ರೋತ್ಸಾಹ ನೀಡಿದರು. ಅನೇಕ ಸುಲ್ತಾನರು ಪರಧರ್ಮ ಸಂಹಿಷ್ಣತೆ ಹೊಂದಿರಲಿಲ್ಲ. ಮುಸ್ಲಿಂರಿಗೆ ಮಾತ್ರ ಉನ್ನತ ಹುದ್ದೆ ನೀಡುತಿದ್ದರು. ಬಹಮನಿ ರಾಜರ ಗುಣದೋಷಗಳ ಗಣನೆಯ ವಿಚಾರದಲ್ಲಿ ಚರಿತ್ರೆಕಾರರಲ್ಲಿ ಡಾ॥ ವಿ.ಎ ಸ್ಮಿತ್ ಅವರು "ಈ ರಾಜರು ಸೀರೋ ಮತ್ತು ಕಲಿಗುಲ ಮುಂತಾದವರಂತೆ ರಕ್ತಪಿ ಪಾಸುಗಳು ಸರ್ವಾಧಿಕಾರಿಗಳು ಆಗಿದ್ದರೆಂದು ಹೇಳಿದ್ದಾರೆ." ಇದಕ್ಕೆ ವಿರುದ್ದವಾಗಿ ಮಾಡೋಸ್ ಟೈಲರ್ ಅವರು ಅವರನ್ನು ಮುಕ್ತ ಕಂಠದಿಂದ ಹೊಗಳಿದ್ದಾರೆ. "ನಿಷ್ಪಕ್ಷಪಾತಿಯೋಥ ಇತಿಹಾಸದ ವಿದ್ಯಾರ್ಥಿಯು ಬಹಮನಿ ರಾಜರ ಆಶ್ರಯದಲ್ಲಿ ಕರ್ನಾಟಕವು ಪ್ರಗತಿಯನ್ನು ಸಾಧಿಸಿತು ಎಂದು ಹೇಳಬೇಕಾಗುತ್ತದೆ." ಘೋರ ಯುದ್ಧಗಳ ನಡುವೆಯೊ ರೈತರಿಗೆ ತೊಂದರೆಯುಂಟಾಗಲಿಲ್ಲ. ಮಹಮೂದ್ ಗವಾನ್ ರೈತರಿಂದ ಹಣವನ್ನು ವಸೂಲು ಮಾಡವ ಪದ್ದತಿಯನ್ನು ಉತ್ತಮಗಳಿಸಿದ್ದನು ಮತ್ತು ರೈತರು ರಾಜಾದಾಯವನ್ನು ದ್ರವ್ಯರೂಪವಾಗಿ ಇಲ್ಲವೇ ದಾನ್ಯರೂಪವಾಗಿ ಕೊಡುವ ಸ್ವಾತಂತ್ರ್ಯವನ್ನು ಕಲ್ಪಿಸಿದ್ದನು. ೧೪೭೦ ರಲ್ಲಿ ಬೀದರಗೆ ಬೇಟಿನೀಡಿದ ರಷ್ಯಾನ ವ್ಯಾಪಾರಿಯಾದ ನಿಕೆಟಿನ್ "ರಾಜ್ಯವು ಜನ ಭರಿತವಾಗಿದ್ದು ಮಾರ್ಗಗಳು ಸುರಕ್ಷಿತವಾಗಿದ್ದು ರಾಜಧಾನಿಯಾ ಶೋಭಾಯಮಾನವಾಗಿ ಉದ್ಯಾನಗಳಿಂದಲೂ ವಿಹಾರ ಪಂಥಗಳಿಂದಲೂ ಕೂಡಿದ್ದಿತು" ಎಂದು ಹೇಳಿದ್ದಾನೆ. ಈ ಮೇಲಿನ ಅಧ್ಯಯನದಿಂದ ತಿಳಿದು ಬರುವುದೇನೆಂದರೆ ಬಹಮನಿ ಕಾಲವು ಕಾಳಗಗಳ ಯುಗವಾಗಿತ್ತು. ಅದು ಅನ್ಯ ರಾಜ್ಯಗಳೊಂದಿಗೆ ಒಂದಲ್ಲಾ ಒಂದು ಕಾರಣದಿಂದ ಸದಾ ಕಾದಾಟದಲ್ಲಿ ತೊಡಗುತಿದ್ದರು. ಆದರು ಸಹ ಸರ್ವಾಧಿಕಾರಿಗಳಾದ ಅನೇಕ ಬಹಮನಿ ರಾಜರು ತಾವು ಸ್ವಂತ ಸಾಹಿತ್ಯಿಗಳಾಗಿದ್ದು ಸಾಹಿತ್ಯ ಮತ್ತು ಕಲಾಗಾರರ ಆಶ್ರಯದಾತರಾಗಿದ್ದರು. ಅವರು ವಿದ್ಯೆಗೆ ಪ್ರೋತ್ಸಾಹವನ್ನು ಕೊಟ್ಟಿದಲ್ಲದೆ ಅತ್ಯಂತ ಮಹತ್ತರ ಸೌಧಗಳ್ಳು ಕಟ್ಟಿ ರಾಜಧಾನಿಯಾದ ಬೀದರನ್ನು ಸಿಂಗರಿಸಿದರು.

# ಗ್ರಂಥಋಣ

## ಕನ್ನಡ ಭಾಷೆಯ ಆಧಾರ ಗ್ರಂಥಗಳು


೧ ಮೂಲ : ರಾಬರ್ಟ ಸೆವೆಲ್ : ಮರೆತುಹೋದ ಮಹಾಸಾಮ್ರಾಜ್ಯ
ಅನು : ಸದಾನಂದ ಕನವಳ್ಳಿ ವಿಜಯನಗರ, ಪ್ರಸಾರಂಗ ಕನ್ನಡ ವಿಶ್ವವಿದ್ಯಾಯಲಯ, ಹಂಪಿ- ೨೦೦೮

೨ ತಿಪ್ಪೇರುದ್ರ ಸ್ವಾಮಿ ಎಚ್ : ಕರ್ನಾಟಕ ಸಂಸ್ಕೃತ ಸಮೀಕ್ಷೇ, ಡಿ.ವಿ.ಕೆ ಮೂರ್ತಿ, ಮೈಸೂರು-೨೦೦೭

೩ ಶಿವರುದ್ರ ಸ್ವಾಮಿ ಎಸ್.ಎನ್. : ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ, ಪೌರಸ್ತ್ಯ ಪ್ರಕಾಶನ ಮೈಸೂರು - ೨೦೦೬

೪ ಸೂರ್ಯನಾಥ ಕಾಮತ : ಕರ್ನಾಟಕ ಕೈಗನಡಿ, ಕರ್ನಾಟಕ ಇತಿಹಾಸ ಅಕಾಡೇಮಿ, ಬೆಂಗಳೂರು,-೨೦೦೭

೫ ಸುರೇಶ ಬಿ ಹೂಗಾರ : ಕರ್ನಾಟಕ ಪ್ರಮುಖ ಐತಿಹಾಸಿಕ ಸ್ಥಳಗಳು, ವಾಸನ್ ಪಬ್ಲಿಕೇಶನ್, ಬೆಂಗಳೂರು-೨೦೦೮

೬ ಲಿಂಗಣ್ಣ ಗುಂಡಳ್ಳಿ : ಭೂಪಟಗಳ ಮೂಲಕ ಕರ್ನಾಟಕ ಇತಿಹಾಸ, ವಾಸವಿ ಪ್ರಕಾಶನ, ಬೆಂಗಳೂರು-೨೦೦೬

೭ ಬಸವರಾಜ ಸಬರದ : ಕಲಬುರ್ಗಿ ಜಿಲ್ಲಾ ದರ್ಶನ, ಪ್ರಸಾರಂಗ ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ- ೨೦೦೫

೮ ಶೇಕ ಅಲಿ. ಬಿ : ಕರ್ನಾಟಕ ಚರಿತ್ರೆ, ಭಾಗ-೦೫, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ. ಹಂಪಿ-೧೯೯೭

೯ ಶೇಕ ಅಲಿ. ಬಿ : ಕರ್ನಾಟಕ ಚರಿತ್ರೆ, ಭಾಗ-೦೪, ಪ್ರಸಾರಂಗ ಕನ್ನಡ, ವಿಶ್ವವಿದ್ಯಾಲಯ. ಹಂಪಿ-೧೯೯೭

೧೦ ಕೃಷ್ಣರಾವ್ ಎಮ್.ವಿ : ಕರ್ನಾಟಕ ಇತಿಹಾಸ ದರ್ಶನ, ಬೆಂಗಳೂರು- ೧೯೭೦

೧೧ ರಂಗಸ್ವಾಮಿ ಎಚ್.ಜಿ : ಕರ್ನಾಟಕ ಪರಂಪರೆ, ಕನ್ನಡ ಸಾಹಿತ್ಯ ಸಂಘ , ಸುರುಪುರ-೧೯೬೪

೧೨ ಪಾಲಾಕ್ಷ : ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ, ಶಶಿ ಪ್ರಕಾಶನ, ತುಮಕೂರ-೨೦೦೦

೧೩ ಸದಾಶಿವ ಕೆ : ಮಧ್ಯಯುಗಿನ ಭಾರತದ ಇತಿಹಾಸ, ಪ್ರಿಯದರ್ಶಿನಿ ಪ್ರಕಾಶನ, ಮೈಸೂರು-೨೦೦೪

೧೪ : ಕರ್ನಾಟಕ ಪರಂಪರೆ, ಸಂಪುಟ-೨ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು-೨೦೦೬

೧೫ ಪಾಟೀಲ. ಎಂ.ಬಿ (ಸಂ) : ಕರ್ನಾಟಕ ರಾಜ್ಯ ಗ್ಯಾಸೆಟಿಯರ, ಕಲಬುರ್ಗಿ ಜಿಲ್ಲೆ ಕರ್ನಾಟಕ ರಾಜ್ಯ ಸರ್ಕಾರ. ಬೆಂಗಳೂರು-೧೯೯೭

೧೬ ಮುನಿಸ್ವಾಮಿ ಆರ್. (ಸಂ) : ಕರ್ನಾಟಕ ರಾಜ್ಯ ಗ್ಯಾಸೆಟಿಯರ, ವಿಜಾಪುರ ಜಿಲ್ಲೆ ಕರ್ನಾಟಕ ರಾಜ್ಯ ಸರ್ಕಾರ. ಬೆಂಗಳೂರು-೧೯೯೯

೧೭. ಸೂರ್ಯನಾಥ ಯು. ಕಾಮತ : ಕರ್ನಾಟಕ ರಾಜ್ಯ ಗ್ಯಾಸೆಟಿಯರ ಕರ್ನಾಟಕ ರಾಜ್ಯ ಸರ್ಕಾರ. ಬೆಂಗಳೂರು-೧೯೯೬

## ಇಂಗ್ಲಿಷ ಭಾಷೆಯ ಆಧಾರ ಗ್ರಂಥಗಳು :

೧ ಅನೀಲ ಸಕ್ಸೆನಾ : ಮುಸ್ಲಿಂ ಕಿಂಗ್‌ಡಮ್ಸ್ ಆಫ್ ಸೌತ್ ಇಂಡಿಯಾ, ಅನ್‌ಮೋಲ್ ಪಬ್ಲಿಕೇಶನ್, ನ್ಯೂ ದೆಹಲಿ-೨೦೦೭

೨ ಭಾಷನ್ ಎ.ಎಲ್. (ಎಡಿಟ್) : ಎ ಕಲ್ಚುರಲ್ ಹಿಸ್ಟರಿ ಆಫ್ ಇಂಡಿಯಾ, ಆಕ್ಸಫರ್ಡ ಯುನಿವರ್ಸಿಟಿ ಪ್ರೇಸ್ಸ್. ನ್ಯೂ ದೆಹಲಿ-೧೯೭೫

೩ ನೀಲಕಂಠ ಶಾಸ್ತ್ರಿ ಕೆ.ಎ : ಎ ಹಿಸ್ಟರಿ ಆಫ್ ಸೌತ್ ಇಂಡಿಯಾ, ಆಕ್ಸಫರ್ಡ, ಯುನಿವರ್ಸಿಟಿ ಪ್ರೇಸ್ಸ್, ನ್ಯೂ ದೆಹಲಿ-೧೯೭೬

೪ ಶೇಕ್ ಅಲಿ. ಬಿ (ಎಡಿಟ್) : ಕರ್ನಾಟಕ ಹಿಸ್ಟರಿ, ವ್ಯಾಲುಮ್-೧,೩. ವಾಸನ್ ಪಬ್ಲಿಕೇಶನ್, ಧಾರವಾಡ-೧೯೯೮

೫ ಚಿತ್ತರಂಜನ್ ಎಚ್ : ಕರ್ನಾಟಕ ಸ್ಟೇಟ್ ಗುಲಬರ್ಗಾ ಡಿಸ್ಟ್ ಗ್ಯಾಸೆಟಿಯರ. ಗೊರಮೆಂಟ ಆಫ್ ಕರ್ನಾಟಕ, ಬೆಂಗಳೂರು-೧೯೯೫

೬ ಭಂಡಾರಕರ್ ಆರ್. ಜಿ : ಅರ್ಲಿ ಹಿಸ್ಟರಿ ಆಫ್ ಡೆಕನ್, ಏಷಿಯನ್ ಎಜುಕೇಶನ್‌ಲ್ ಸರ್ವಿಸ್ ನ್ಯೂ ದೆಹಲಿ-೧೯೯೫

೭ ಸಿರಿನ್ ಟಿ.ಆರ್.ಸಿರಿನ್.ಎಸ್.ಆರ್: ಇಂಡಿಯಾ ಥ್ರೂ ಎಜಸ್ಸ್, ವ್ಯಾಲುಮ್-೩ ಅನ್‌ಮೋಲ್ ಪಬ್ಲಿಕೇಶನ್ ನ್ಯೂ ದೆಹಲಿ-೧೯೭೮

೮ ಚೋಪ್ರಾ ಎನ್.ಪಿ : ಹಿಸ್ಟರಿ ಆಫ್ ಸೌತ್ ಇಂಡಿಯಾ, ವ್ಯಾಲುಮ್-೨, ನ್ಯೂ ದೆಹಲಿ-೧೯೭೯

೯ ಶೇರವಾನಿ.ಎಚ್.ಕೆ & ಜೋಶಿ : ಹಿಸ್ಟರಿ ಆಫ್ ಮಿಡಿವಲ್ ಡೆಕನ್, ಹೈದ್ರಾಬಾದ-೧೯೭೩

೧೦ ನೀಲಕಂಠ ಶಾಸ್ತ್ರಿ&ಶ್ರೀನಿವಾಸ ಜಿ : ಅಡವಾನ್ಸ್ ಹಿಸ್ಟರಿ ಆಫ್ ಇಂಡಿಯಾ, ಚಾಲುಕ್ಯ ಪಬ್ಲಿಕೇಶನ್, ನ್ಯೂ ದೆಹಲಿ-೧೯೮೨

೧೧ : ಬಹಮನಿ ಕಿಂಗ್‌ಡಮ್. ಕಾಮ್ ಗುಲಬರ್ಗಾ-೨೦೦೯

೧೨ ಮಜುಮ್‌ದಾರ ಆರ್.ಸಿ : ದ ಹಿಸ್ಟರಿ ಆಂಡ್ ಕಲ್ಚರ್ ಆಫ್ ಇಂಡಿಯನ್ ಪಿಪಲ್, ಬಾಂಬೆ

೧೩ ದಿವಾಕರ್ ಆರ್.ಆರ್ : ಕರ್ನಾಟಕ ಥ್ರೂ ದ್ ಎಜೆಸ್ಸ್, ಬೆಂಗಳೂರು-೧೯೬೮

೧೪ ಮೆಹತಾ ಜಿ.ಎಲ್ : ಅಡ್‌ವಾನ್ಸ ಸ್ಟಡಿ ಇನ್ದ ಹಿಸ್ಟರಿ ಆಫ್ ಮಿಡಿವಲ್, ಇಂಡಿಯಾ, ನ್ಯೂ ದೆಹಲಿ-೧೯೮೭

೧೫ ಶ್ರೀನಿವಾಸಮೂರ್ತಿ, ರಾಮಕೃಷ್ಣಾ ಆರ್ : ಹಿಸ್ಟರಿ ಆಫ್ ಕರ್ನಾಟಕ, ಬೆಂಗಳೂರು

೧೬ ಶರ್ಮಾ ಎಲ್.ಪಿ : ಹಿಸ್ಟರಿ ಆಫ್ ಮಿಡಿವಲ್ ಇಂಡಿಯಾ, ನ್ಯೂ ದೆಹಲಿ-೧೯೮೭

೧೭ ಶ್ರೀವಾಸ್ತವ ಎ. ಸಿ : ಮಿಡಿವಲ್ ಇಂಡಿಯನ್, ಕಲ್ಚರ್ ಆಗ್ರಾ-೧೯೮೭


<><>


ವಿಜಯನಗರ ಸಾಮ್ರಾಜ್ಯ
ಬಹಮನಿ ರಾಜ್ಯ


ನರ್ಮದಾ ನದಿ
ಇಮಾದ್ ಷಾಹಿ
ಖಾಂದೇಶ್
ಬೀರಾರ್
ನಿಜಾಮ್ ಷಾಹಿ
ಅಹಮದ್ ನಗರ
ಬಹಮನಿ ರಾಜ್ಯ
ಓರಂಗಲ್
ಬೀದರ್
ಬಿಜಾಪುರ
ಗುಲಬರ್ಗಾ
ರಾಜಮಹೇಂದ್ರಿ
ಹೈದರಾಬಾದ್
ತಾಳಿಕೋಟೆ
ಶ್ರೀಶೈಲ
ಕೊಂಡವೀಡು
ರಕ್ಕಸತಂಗಡಿ
ಕಂಪ್ಲಿ
ಬಂಕಾಪುರ
ವಿಜಯನಗರ
ಲೇಪಾಕ್ಷಿ
ಮಂಗಳೂರು
ಶೃಂಗೇರಿ
ಪೆನ್ನುಗೊಂಡ
ಮದ್ರಾಸ
ವಿಜಯನಗರ ಸಾಮ್ರಾಜ್ಯ
ಹಳೇಬೀಡು
ಶ್ರೀರಂಗಪಟ್ಟಣ
ಮೈಸೂರು
ಉಮ್ಮತ್ತೂರು
ತಂಜಾವೂರು
ಮಧುರೈ
ಅರಬ್ಬಿಸಮುದ್ರ
ಬಂಗಾಳ ಕೊಲ್ಲಿ
ಹಿಂದೂ ಮಹಾಸಾಗರ

